KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೪, ೨೦೦೬ (ಭಾದ್ರಪದ ೨೩, ಶಕವರ್ಷ ೧೯೨೮) | ಸಂಚಿಕೆ ೩೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿಗಳು)**

**ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ**

**ತಿದ್ದುಪಡಿ - ಅಧಿಸೂಚನೆ**

**ಸಂ. ಹೆಆಕಾನಿಇಂ : ರಾಹೆವಿ : ಕಾ : ಎಇ : ಎನ್‌ಐಟಿ : 2006-07 : 704, ದಿನಾಂಕ: 19ನೇ ಆಗಸ್ಟ್ 2006**

**ಉಲ್ಲೇಖ :** ಈ ಕಚೇರಿ ಟೆಂಡರ್ ಅಧಿಸೂಚನೆ ಸಂಖ್ಯೆ: ಹೆಆಕಾನಿಇಂ : ರಾಹೆವಿ : ಕಾ : ಎಇ : ಸಿಆರ್‌ಎಫ್ : 2006-07 : 500, ದಿ: 15.07.2006.

ಉಲ್ಲೇಖ ಪತ್ರದಲ್ಲಿ ಸೂಚಿಸಿರುವ ಟೆಂಡರ್ ಅಧಿಸೂಚನೆಯಲ್ಲಿ ಹೊರಡಿಸಲಾಗಿರುವ ಕಾಮಗಾರಿಯ ಟೆಂಡರ್‌ಗೆ ಇಟ್ಟ ಮೊತ್ತ ಹಾಗೂ ಇ.ಎಂ.ಡಿ. ಯನ್ನು ಈ ಕೆಳಗೆ ಸೂಚಿಸಿರುವಂತೆ ಪರಿಷ್ಕರಣೆ ಮಾಡಲಾಗಿದೆ.

**1. ಟೆಂಡರ್‌ಗೆ ಇಡಲಾದ ಮೊತ್ತ (ರೂ. ಗಳಲ್ಲಿ) - 75,65,000-00**

**2. ಇ.ಎಂ.ಡಿ. ಮೊತ್ತ (ರೂ. ಗಳಲ್ಲಿ) - 75,650-00**

ಇನ್ನಿತರ ಟೆಂಡರ್ ಷರತ್ತುಗಳು ಹಾಗೂ ನಿಭಂದನೆಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ಮಾಹಿತಿಯನ್ನು ಈ ಕಚೇರಿಯಿಂದ ಕಚೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ.

ಪಿ.ಆರ್. 528

**WATER RESOURCES DEPARTMENT**

**Office of the Executive Engineer, No. 4, BRLBC Division, Bhadravathi,**

**CORRIGENDUM**

**No. EE / BDN-4 / PB-1, 2, 3 / Aqueduct / Tender Notification / 2006-07 / 2115/13,**

**Dated: 23rd August 2006**

**Sub :** Tender for the works of Strengthening and Improvements to aqueducts in BRRBC

**Ref :** This office Tender Notification No. 1864/13, 2006-07 Dated: 31.7.2006

The Tender is invited for the works of "Strengthening and Improvements to aqueducts" under the above reference. Now, the Name of the work, Amount put to Tender and E.M.D. for the work under SI No. 9 is changed as below and the stipulated period completion for all the works from SI. No. 1 to 9 is changed as under :

**Name of the work :**

Strengthening and Improvements to Mathihalla aqueduct at Ch 79.70 km of BRRBC

Amount put to Tender Rs. 144.03 Lakhs

EMD : Rs. 1.44 Lakhs

Stipulated period of completion for works from Sl. No. 1 to 9 - 50 days

The remaining conditions are unaltered.

Executive Engineer,
No. 4, BRLBC Division, Bhadravathi.

P.R. 529

**ಜಲ ಸಂಪನ್ಮೂಲ ಇಲಾಖೆ**

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ನಂ. 4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ**

**ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ**

**ನಂ. ಕಾ.ಇಂ / ಬಿ.ಡಿಎನ್-4 / ಟೆಂಡರ್ / ಪಿ.ಬಿ.-3 / 2006-07, ದಿನಾಂಕ: 25ನೇ ಆಗಸ್ಟ್ 2006**

**ವಿಷಯ:** ಭದ್ರಾ ಯೋಜನೆಯ ಟೆಂಡರ್ ಕಾಮಗಾರಿಗಳು.

**ಉಲ್ಲೇಖ :** 1) ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ ಕಾ.ಇಂ / ಬಿಡಿಎನ್-4 / ಪಿ.ಬಿ.-3 / ಟೆಂಡರ್ ಪ್ರಕಟಣೆ / 2005-06 319 ದಿನಾಂಕ: 3.05.06.

2) ಈ ಕಛೇರಿಯ ಟೆಂಡರ್ ಅವಧಿ ವಿಸ್ತರಣೆ ನಂ. ಕಾ.ಇಂ. / ಬಿಡಿಯನ್-4 ಪಿ.ಬಿ-3 : 2006-07 / 1 ದಿನಾಂಕ: 8.6.2006.

3) ಈ ಕಛೇರಿಯ ಟೆಂಡರ್ ಅವಧಿ ವಿಸ್ತರಣೆ ನಂ. ಕಾ.ಇಂ. / ಬಿಡಿಯನ್-4 ಪಿ.ಬಿ.-3 : 1127/11 ದಿನಾಂಕ: 24.6.2006.

4) -,,- ನಂ. 1795/13 ದಿನಾಂಕ: 27.7.2006.

ಮೇಲ್ಕಂಡ ಉಲ್ಲೇಖಿತ ಪತ್ರದಲ್ಲಿ ಈ ಕಛೇರಿಯಿಂದ ಪ್ರಕಟಿಸಲಾದ ಭದ್ರಾ ಯೋಜನೆಯ ನಿರ್ವಹಣಾ ಟೆಂಡರ್ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಪ್ರಕಟಿಸಿದ ಟೆಂಡರುಗಳಿಗೆ ಈ ಕೆಳಕಂಡಂತೆ ಟೆಂಡರ್ ಅವಧಿ ವಿಸ್ತರಣೆ ಮಾಡಲಾಗಿದೆ.

1. ನಿಗಧಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿ: 29.9.06 ಸಂಜೆ 5.30 ರವರೆಗೆ
2. ಖಾಲಿ ಟೆಂಡರ್ ಫಾರಂ ಗಳನ್ನು ಕೊಡುವ ದಿನಾಂಕ: 3.10.06 ಸಂಜೆ 5.30 ರವರೆಗೆ
3. ತುಂಬಿದ ಟೆಂಡರ್ ಗಳನ್ನು ಸ್ವೀಕರಿಸುವ ದಿನಾಂಕ: 4.10.06 ಸಂಜೆ 4.00 ರವರೆಗೆ

ಟೆಂಡರ್ ಫಾರಂಗಳನ್ನು ದಿ: 4.10.06 ಸಂಜೆ 4-30 ಘಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೊಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಹೆಚ್. ಮಂಜಪ್ಪ**
ಕಾರ್ಯಪಾಲಕ ಅಭಿಯಂತರು,
ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

ಪಿ.ಆರ್. 532

**ಅರಣ್ಯ ಇಲಾಖೆ**

**ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ದೊರೆಸಾನಿಪಾಳ್ಯ**

**ಬೆಂಗಳೂರು – 560 076.**

**ಅರಣ್ಯ ಕಾಮಗಾರಿಗಳ ಟೆಂಡರ್ ಪ್ರಕಟಣೆ**

**ಸಂಖ್ಯೆ :ಎ2–ಬಿಯುಡಿ–ಸಿಆರ್–25 /2006–07, ದಿನಾಂಕ: 05ನೇ ಸೆಪ್ಟೆಂಬರ್ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2006–07ನೇ ಸಾಲಿಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ವಿಭಾಗದ ವ್ಯಾಪ್ತಿಗೊಳಪಟ್ಟಿರುವ ಬೆಂಗಳೂರು ಸಂಶೋಧನಾ ವಲಯದ ದೊರೆಸಾನಿಪಾಳ್ಯ ಸಂಶೋಧನಾ ಕೇಂದ್ರದಲ್ಲಿ ಕಾಂಪೌಂಡ್ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ 2006–07ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಸದರಿ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ.

ದಿನಾಂಕ: 22–09–2006 ರಂದು 3.00 ಘಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು 3.30 ಘಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ: 29–09–2006 ರಂದು ಸಂಜೆ 3.00 ಘಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು 3.30 ಘಂಟೆಗೆ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.

ಷೆಡ್ಯೂಲ್

| ಸಂಖ್ಯೆ | ವಲಯ | ಕಾಮಗಾರಿಗಳ ವಿವರ | ಅಂದಾಜು ಭೌತಿಕ ಪರಿಮಾಣ | ಅಂದಾಜು ಮೊತ್ತ (ಲಕ್ಷಗಳಲ್ಲಿ) | ನಿಗಧಿಪಡಿಸಿದ ಇಎಂಡಿ ಮೊತ್ತ | ಕೆಲಸ ಮುಕ್ತಾಯ ಗೊಳಿಸುವ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಬೆಂಗಳೂರು | Eastern side near panduranganagara layout point 39 to 36 between E & F | 170 Rmtr | 9.00 | 22,500.00 | 28-02-2007 | |

ಟೆಂಡರ್ ನಮೂನೆಯನ್ನು ದಿನಾಂಕ: 22-09-2006 ಮತ್ತು 29-09-2006 ರಂದು 1.00 ಘಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ). ಒಂದೊಂದು ಕೆಲಸಕ್ಕೆ ಸಂಚಕಾರ ಠೇವಣಿಯನ್ನು ಡಿಡಿ ರೂಪದಲ್ಲಿ ಷೆಡ್ಯೂಲ್ ಕಾಲಂ ಸಂಖ್ಯೆ: 6 ರಲ್ಲಿರುವಂತೆ ಪ್ರತ್ಯೇಕವಾಗಿ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ ಮತ್ತು ಎರಡನೇ ಬಾರಿಗೆ ಟೆಂಡರ್ ನಡೆಯಬಹುದಾದಲ್ಲಿ ಟೆಂಡರ್ ನಮೂನೆಯನ್ನು ದಿನಾಂಕ: 29-09-2006 ರಂದು 1.00 ಘಂಟೆಯವರಗೆ ಪಡೆಯಬಹುದಾಗಿದೆ.

ನಿಬಂಧನೆಗಳು

1) ಟೆಂಡರ್‌ದಾರರು 2006-07ನೇ ಸಾಲಿನಲ್ಲಿ ನೋಂದಾಯಿಸಲ್ಪಟ್ಟ ಅರಣ್ಯ ಗುತ್ತಿಗೆದಾರರಾಗಿರಬೇಕು.
2) ಟೆಂಡರ್ ಫಾರಂಗಳ ಜೊತೆ ಅಂದಾಜು ವೆಚ್ಚದ ಇ.ಎಂ.ಡಿ. ಹಣವನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ಹೆಸರಿನಲ್ಲಿ ಡಿ.ಡಿ. ಪಡೆದು ಫಾರಂ ಜೊತೆ ಲಗತ್ತಿಸಬೇಕು.
3) ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ಕಾಂಪೌಂಡ್ ಗೋಡೆ ನಿರ್ಮಿಸಲು ಟೆಂಡರ್ ಎಂದು ನಮೂದಿಸತಕ್ಕದ್ದು.
4) ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಇದೇ ಸಂಖ್ಯೆಯ ದಿನಾಂಕದ ಸಂಕ್ಷಿಪ್ತ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕದಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು, ಟೆಂಡರ್ ಫಾರಂ ಬೆಲೆ ರೂ. 200.00 (ತೆರಿಗೆ ಪ್ರತ್ಯೇಕ).
5) ಕೆಲಸಗಳನ್ನು ಈ ಕಛೇರಿಯಿಂದ ನೀಡಲಾಗುವ ಡ್ರಾಯಿಂಗ್ ಹಾಗೂ ವಿತರಣೆ ಮಾದರಿ ರೀತಿಯೇ ಮಾಡಬೇಕು. ಹಾಗೂ ಅಂದಾಜು ಪಟ್ಟಿಗಳನ್ನು ತಯಾರಿಸಿ ಪಿ.ಡಬ್ಲ್ಯೂ.ಡಿ ಯಿಂದ ತಾಂತ್ರಿಕ ಪರಿಶೀಲನೆ ಮಾಡಿಸಿ (ತಾಂತ್ರಿಕ ಪರಿಶೀಲನೆ ವೆಚ್ಚವನ್ನು ಇಲಾಖಾ ವತಿಯಿಂದ ಭರಿಸಲಾಗುವುದು). ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು, ಇವರಿಂದ ಒಪ್ಪಿಗೆ ಪಡೆದ ನಂತರ ಕೆಲಸ ನಿರ್ವಹಿಸಬೇಕು.
6) ದಿನಾಂಕ: 22-09-2006 ಮತ್ತು 29-09-2006 ಸಂಜೆ 3.00 ಘಂಟೆ ವೇಳೆಯವರೆಗೆ ಟೆಂಡರನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಡಬ್ಬದಲ್ಲಿ ಹಾಕಬೇಕು.
7) ದಿನಾಂಕ: 22-09-2006 ಮತ್ತು 29-09-2006 ಸಂಜೆ 3.00 ಘಂಟೆಗೆ ಹಾಜರಿರುವ ಗುತ್ತಿಗೆದಾರರ / ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
8) ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಅರಣ್ಯ ಕೃಷಿಕರು, ಕೇಂದ್ರ ವಲಯ ರವರಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.
9) ಪಿ.ಡಬ್ಲ್ಯೂ.ಡಿ. ದರಗಳಲ್ಲದ ಕೆಲಸ, ವಸ್ತುಗಳಿಗೆ ಡಾಟಾ ತಯಾರಿಸಿ ಪಿ.ಡಬ್ಲ್ಯೂ.ಡಿ. ಅಧಿಕೃತ ಅಭಿಯಂತರರಿಂದ ಅಂಗೀಕರಿಸಲ್ಪಟ್ಟ ದರವನ್ನು ಅಳವಡಿಸಿ ಅಂದಾಜು ಪಟ್ಟಿ ತಯಾರಿಸಲಾಗುವುದು.
10) ಯಶಸ್ವಿ ಟೆಂಡರ್‌ದಾರರು ಕಾರ್ಯಾದೇಶ ಕೊಟ್ಟ 3 ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200.00 ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಂಡು ಕೆಲಸದ ಆದೇಶ ಪಡೆಯುವುದು.
11) ಗುತ್ತಿಗೆದಾರರು ಸೂಚಿಸಬಹುದಾದ ಯಾವುದೇ ಷರತ್ತು / ಷರತ್ತಿನ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.
12) ಇ.ಎಂ.ಡಿ. ಹಣವನ್ನು ಯಶಸ್ವಿ ಟೆಂಡರ್‌ದಾರರಿಗೆ ಟೆಂಡರ್ ಕೆಲಸ ಮುಗಿದ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.
13) ಪ್ರತಿ ಬಿಲ್‌ನಲ್ಲಿ ಶೇಕಡ 2 ರಷ್ಟನ್ನು ಆದಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚ್‌ಚಾರ್ಜನ್ನು ಮತ್ತು ನಿಯಮದಂತೆ ಮಾರಾಟ ತೆರಿಗೆಯನ್ನು ಹಿಡಿಯಲಾಗುವುದು.
14) ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ಸಂಶೋಧನೆ ಮತ್ತು ಬಳಕೆ ವೃತ್ತ ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
15) ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಪಿ.ಡಬ್ಲ್ಯೂ.ಡಿ. 2006-07ನೇ ಸಾಲಿನ ದರಕ್ಕಿಂತ ಶೇಕಡ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ಸ್ಪಷ್ಟವಾಗಿ ಸಂಖ್ಯೆ ಮತ್ತು ಪದಗಳಲ್ಲಿ ನಮೂದಿಸಬೇಕು.
16) ಕೆಲಸದ ಆದೇಶದ ನೀಡಿದ ದಿನಾಂಕದಿಂದ ನಿಗಧಿಪಡಿಸಿದ ದಿನಾಂಕದೊಳಗೆ ಕೆಲಸವನ್ನು ಪೂರೈಸತಕ್ಕದ್ದು.
17) ಟೆಂಡರ್‌ದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು, ಮತ್ತು ಕಟ್ಟಡದ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಆಸ್ತಿ:ನಷ್ಟ ಸಂಭವಿಸಿದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರೇ ಹೊಣೆಗಾರರಾಗಿರುತ್ತಾರೆ.

18) ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು:ಅರಣ್ಯ ಕೃಷಿಕರು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್‌ನ್ನು ಪಾವತಿಸತಕ್ಕದ್ದು.

19) ಟೆಂಡರ್‌ದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.

20) ಅರಣ್ಯ ಕೃಷಿಕರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.

21) ಸಾರ್ವತ್ರಿಕ ರಜಾ ದಿನಗಳಲ್ಲಿ ಕೆಲಸ ಮಾಡಬೇಕಾದರೆ ಅರಣ್ಯ ಕೃಷಿಕರುಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.

22) ಟೆಂಡರ್ ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಅರಣ್ಯ ಕೃಷಿಕರಿಗೆ ತೃಪ್ತಿಕರವಾಗದೆ ಇದ್ದಲ್ಲಿ ಆ ಕೆಲಸಕ್ಕೆ ಅರಣ್ಯ ಕೃಷಿಕರ ತೀರ್ಮಾನವೇ ಅಂತಿಮವಾದುದು.

23) ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗಧಿಪಡಿಸಿರುವ ಮಾಪನ ಪದ್ಧತಿಯ ರೀತ್ಯ ಮಾಡಲಾಗುವುದು.

24) ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗಧಿ ಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇಕಡ ಒಂದರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು : ಅರಣ್ಯ ಕೃಷಿಕರು ನಿಗಧಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.

25) ಈ ಕೆಲಸ ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರ : ದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದುಕೊಳ್ಳಲಾಗುವುದು.

26) ಟೆಂಡರುದಾರರು ನಿಗಧಿತ ಅವಧಿಯಲ್ಲಿ ಕೆಲಸವನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟು ಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಸ್ವಂತ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾ ವತಿಯಿಂದ ಮಾಡಿಸಲು ಅರಣ್ಯ ಕೃಷಿಕರಿಗೆ ಸಂಪೂರ್ಣ ಹಕ್ಕು ಇರುತ್ತದೆ. ಮತ್ತು ಈ ಸಂಬಂಧ ಅರಣ್ಯ ಕೃಷಿಕರು ಕೆಲಸದ ಬಗ್ಗೆ ನೀಡಿದ ಧೃಢೀಕರಣ ಪತ್ರವೇ ಅಂತಿಮವಾಗಿರುತ್ತದೆ.

27) ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

28) ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಅರಣ್ಯ ಕೃಷಿಕರುಗಳಿಗೆ ಅಧಿಕಾರವಿರುತ್ತದೆ, ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.

29) ಕೆಲಸದಲ್ಲಿ ಏನಾದರೂ ಬದಲಾವಣೆ : ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ಧವಾಗಿರುವುದಿಲ್ಲ.

30) ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು, ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ಧರಾಗಿರಬೇಕು.

31) ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕೆಳಪೆಯಾಗಿದ್ದಲ್ಲಿ ಅರಣ್ಯ ಕೃಷಿಕರು ನಿಗಧಿಪಡಿಸುವ ದಂಡವನ್ನು ಕಟ್ಟಬೇಕು ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.

32) ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದು ಪಡಿಸುವುದಲ್ಲದೆ ಇ.ಎಂ.ಡಿ. ಮತ್ತು ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

33) ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ನೌಕರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದಲ್ಲಿ ಅವರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು, ಒಂದು ವೇಳೆ ಈ ವೆಚ್ಚವನ್ನು ಇಲಾಖೆ ಭರಿಸಿದಲ್ಲಿ ಟೆಂಡರುದಾರರಿಗೆ ನೀಡ ಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.

34) ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸಿದ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

35) ಕೆಲಸ ಪ್ರಾರಂಭಿಸಿದ್ದಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.

36) ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

37) ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಕ್ರಾಸ್ಡ್ ಚೆಕ್ ಮೂಲಕ ನೀಡಲಾಗುವುದು.

38) ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ತೆರಿಗೆ ದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.

39) ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

40) ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.

41) ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇ.ಎಂ.ಡಿ. ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ ಮತ್ತು ಈ ಬಗ್ಗೆ ಯಾವುದೇ ರೀತಿ ಪರಿಹಾರ ನೀಡಲಾಗುವುದಿಲ್ಲ.

42) ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ ಮಾಡಿರುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ, ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.

43) ಪಿ.ಡಬ್ಲ್ಯೂ.ಡಿ. ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.

44) ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.

45) ನಮೂದಿಸಿದ ದರಗಳಲ್ಲಿ ಸಾಮಾಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯಲಾಗುವುದು.

46) ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳದಲ್ಲಿ ದಾಸ್ತಾನು ಮಾಡಬೇಕು, ತಿರಸ್ಕೃತವಾದ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.

47) ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡ 0.5ನ್ನು ಬಿಲ್ಲುಗಳಲ್ಲಿ ಕಡಿತಗೊಳಿಸಲಾಗುವುದು.

48) ಟೆಂಡರ್‌ದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸವು ಸೇರಿರುತ್ತದೆ ಎಂದು ತಿಳಿಯುವುದು.

49) ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.

50) ಷೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2006–07ರ ಬೆಂಗಳೂರು ವೃತ್ತದ (ಷೆಡ್ಯೂಲ್ ದರ) ಮಂಜೂರಾದ ದರದಂತಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2006–07ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಷೆಡ್ಯೂಲ್ ದರದಲ್ಲಿ ಮಂಜೂರು ಮಾಡಲ್ಪಟ್ಟಿರುತ್ತದೆ. ಯಾವುದೇ ಕಾರಣದಿಂದ 2007–08ನೇ ಸಾಲಿಗೆ ಸದರಿ ಕೆಲಸ ಮುಂದುವರಿದಲ್ಲಿ (ಅಂದರೆ ಆರು ತಿಂಗಳ ಗಡುವಿನೊಳಗೆ) 2006–07ನೇ ಸಾಲಿನ ದರದಂತೆ ಮಂಜೂರಾದ ಅಂದಾಜು ಪಟ್ಟಿಯ ದರಗಳ ಪ್ರಕಾರವೇ ಕಾರ್ಯ ನಿರ್ವಹಿಸಬೇಕಾಗುತ್ತದೆ.

51) ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯ ಸಂದರ್ಭ ಉದ್ಭವಿಸಿದಲ್ಲಿ ಬೆಂಗಳೂರು ನಗರ ಸಿವಿಲ್ ನ್ಯಾಯಾಲಯ ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.

52) ಕರ್ನಾಟಕ ಮಾರಾಟ ತೆರಿಗೆ ಅಡಿಯಲ್ಲಿ ನೋಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ, ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (Sales Tax Clearance Certificate) ಲಗತ್ತಿಸಬೇಕು.

53) ಸೂರ್ಯೋದಯಕ್ಕೆ ಮುಂಚೆ ಹಾಗೂ ಸೂರ್ಯ ಮುಳುಗಿದ ನಂತರ ಯಾವುದೇ ರೀತಿಯ ನಿರ್ಮಾಣ ಕಾರ್ಯಗಳನ್ನು ಗುತ್ತಿಗೆದಾರರು ಮಾಡಬಾರದು.

ಅರಣ್ಯ ಕೃಷಿಕರು,
ಕೇಂದ್ರ ವಲಯ, ಬೆಂಗಳೂರು.

ಪಿ.ಆರ್. 553

ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು

ಟೆಂಡರ್ ಪ್ರಕಟಣೆ

ಸಂಖ್ಯೆಃಎ7.ಕೆರೆ.ತಂತಿಬೇಲಿ.ಸಿಆರ್ / 5 / 06-07, ದಿಃ 30ನೇ ಆಗಸ್ಟ್ 2006

ವಿಷಯಃ 2006-07ನೇ ಸಾಲಿಗೆ ಬೆಂಗಳೂರು ನಗರ ವಿಭಾಗದ ವ್ಯಾಪ್ತಿಯಲ್ಲಿರುವ ಕೆರೆಗಳ ತಂತಿಬೇಲಿ ಕಾಮಗಾರಿ ಬಗ್ಗೆ.

ಉಲ್ಲೇಖಃ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕೆರೆಗಳ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರ ಪತ್ರ ಸಂಖ್ಯೆಃ LDA.CEO.FEN.LAK.141 / 03-04 / 96 ದಿನಾಂಕಃ 16.05.2006.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ ವ್ಯಾಪ್ತಿಯಲ್ಲಿರುವ ಕೆರೆಗಳ ತಂತಿಬೇಲಿ ಕಾಮಗಾರಿಯನ್ನು ಕೈಗೊಳ್ಳಲು 2006-07ನೇ ಸಾಲಿನಲ್ಲಿ ಈ ವಿಭಾಗದಿಂದ ನೊಂದಾಯಿತ ಪ್ರಥಮ ದರ್ಜೆಯ ಖಾಸಗಿ ಗುತ್ತಿಗೆದಾರ ಲೋಕೋಪಯೋಗಿ/ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ/ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ/ಬೆಂಗಳೂರು ಮಹಾನಗರ ಪಾಲಿಕೆ/ಸಣ್ಣ ನೀರಾವರಿ/ ಅರಣ್ಯ ಇಲಾಖೆ/ಸರ್ಕಾರಿ ಸೌಮ್ಯದ ಇತರೆ ಇಲಾಖೆ ಗುತ್ತಿಗೆದಾರರಿಂದ ದಿನಾಂಕಃ 20.09.2006 ರಂದು ಮೊಹರಾದ ಟೆಂಡರ್ ಕರೆಯಲಾಗಿದೆ. ಟೆಂಡರ್‌ನ್ನು ದಿನಾಂಕಃ20.09.2006ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಒಂದು ವೇಳೆ ದಿನಾಂಕಃ 20.09.2006 ರಂದು ಯಾವ ಟೆಂಡರ್‌ದಾರರು ಟೆಂಡರ್‌ನಲ್ಲಿ ಭಾಗವಹಿಸದಿದ್ದಲ್ಲಿ ಇದನ್ನೇ ಮರು ಟೆಂಡರ್ ಪ್ರಕಟಣೆ ಎಂದು ಪರಿಗಣಿಸಿ ದಿನಾಂಕಃ 27.09.2006 ರಂದು ಸಂಜೆ 4.00 ಗಂಟೆಗೆ ಮೊಹರಾದ ಟೆಂಡರ್ ಸ್ವೀಕರಿಸಲಾಗುವುದು. ಟೆಂಡರ್ ಫಾರಂನ್ನು ದಿನಾಂಕಃ 20.09.2006 ಮತ್ತು 27.09.2006 ರಂದು ಈ ಕಛೇರಿಯಲ್ಲಿ ಕಛೇರಿ ಕೆಲಸದ ದಿನ ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಪಡೆಯಬಹುದಾಗಿರುತ್ತದೆ.

ಷೆಡ್ಯೂಲ್

| ಕ್ರಮ ಸಂಖ್ಯೆ | ಸ್ಥಳ | ಕೆಲಸದ ವಿವರ | ಅಂದಾಜು ವೆಚ್ಚ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. (ಇಡಿಗಂಟು) (ರೂ.ಲಕ್ಷಗಳಲ್ಲಿ) |
|---|---|---|---|---|
| 1 | ವಲಗೇರಹಳ್ಳಿ ಕೆರೆ | Chainlink mesh fencing alround the tank - 1.60 Km | ರೂ. 30.40 | ರೂ. 0.304 |
| 2 | ನರಸಪ್ಪನ ಕೆರೆ | Chainlink mesh fencing alround the tank - 2.60 Km | ರೂ. 49.40 | ರೂ. 0.494 |
| 3 | ಅಮೃತಹಳ್ಳಿ ಕೆರೆ | Chainlink mesh fencing alround the tank - 1.80 Km | ರೂ. 34.20 | ರೂ. 0.342 |
| 4 | ಹೆಣ್ಣೂರು ಕೆರೆ | Chainlink mesh fencing alround the tank - 1.54 Km | ರೂ. 29.26 | ರೂ. 0.292 |
| 5 | ಚನ್ನಸಂದ್ರ ಕೆರೆ | Chainlink mesh fencing alround the tank - 1.16 Km | ರೂ. 22.04 | ರೂ. 0.220 |
| 6 | ದೊಡ್ಡಬೊಮ್ಮಸಂದ್ರ ಕೆರೆ | Chainlink mesh fencing alround the tank - 2.75 Km | ರೂ. 52.25 | ರೂ. 0.522 |
| 7 | ಪುಟ್ಟೇನಹಳ್ಳಿ ಕೆರೆ | Chainlink mesh fencing alround the tank - 1.60 Km | ರೂ. 30.40 | ರೂ. 0.304 |
| 8 | ಹೊಸಕೆರೆಹಳ್ಳಿ ಕೆರೆ | Chainlink mesh fencing alround the tank - 2.50 Km | ರೂ. 47.50 | ರೂ. 0.450 |
| 9 | ಆಲಹಳ್ಳಿ ಕೆರೆ | Chainlink mesh fencing alround the tank - 2.00 Km | ರೂ. 38.00 | ರೂ. 0.380 |
| 10 | ಕೈಕೊಂಡನಹಳ್ಳಿ ಕೆರೆ | Chainlink mesh fencing alround the tank - 2.20 Km | ರೂ. 41.80 | ರೂ. 0.418 |
| 11 | ಮೊಗೆಕೆರೆ | Chainlink mesh fencing alround the tank - 0.71 Km | ರೂ. 13.49 | ರೂ. 0.202 |
| | ಒಟ್ಟು | | ರೂ. 388.74 | |

ನಿಬಂಧನೆಗಳು

1. ಟೆಂಡರ್‌ದಾರರು 2006-07ನೇ ಸಾಲಿನಲ್ಲಿ ಈ ವಿಭಾಗದಿಂದ ನೋಂದಾಯಿಸಲ್ಪಟ್ಟ ಪ್ರಥಮ ದರ್ಜೆಯ ಖಾಸಗಿ ಗುತ್ತಿಗೆದಾರ ಲೋಕೋಪಯೋಗಿ / ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ / ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ / ಬೆಂಗಳೂರು ಮಹಾನಗರ ಪಾಲಿಕೆ / ಸಣ್ಣ ನೀರಾವರಿ / ಅರಣ್ಯ ಇಲಾಖೆ / ಸರ್ಕಾರಿ ಸೌಮ್ಯದ ಇತರೆ ಇಲಾಖೆ ಗುತ್ತಿಗೆದಾರರಾಗಿರಬೇಕು.
2. ಟೆಂಡರ್ ಫಾರಂಗಳನ್ನು ರೂ 2.00 ಕೋರ್ಟ್ ಫೀ ಸ್ಟಾಂಪ್ ಹಚ್ಚಿದ ಹಾಗೂ ಅಂದಾಜು ವೆಚ್ಚದ ಹಣವನ್ನು ಮೇಲಿನ ಷೆಡ್ಯೂಲ್‌ನಲ್ಲಿ ವಿವರಿಸಿದಂತೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ಹೆಸರಿನಲ್ಲಿ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸಬೇಕು.
3. ಟೆಂಡರ್ ಫಾರಂಗಳನ್ನು ಸೀಲು ಮಾಡಿದ ಲಕೋಟೆಯಲ್ಲಿಟ್ಟು ಷೆಡ್ಯೂಲ್‌ನಲ್ಲಿ ವಿವರಿಸಿದ ಕಾಮಗಾರಿಗಳಿಗೆ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿರುವಂತೆ ಆಯಾ ದಿನಾಂಕಗಳಂದು ಕಛೇರಿ ವೇಳೆಯಲ್ಲಿ ಕೊಡಲಾಗುವುದು. ಟೆಂಡರ್ ಫಾರಂ ರೂ.200/- (ತೆರಿಗೆಗಳು ಪ್ರತ್ಯೇಕ)
5. ದಿನಾಂಕಃ 20.09.2006 ಮತ್ತು 27.09.2006ರ ಸಂಜೆ 4.00 ಗಂಟೆ ವೇಳೆಯವರೆಗೆ ಟೆಂಡರ್‌ನ್ನು ಈ ಕಛೇರಿಯಲ್ಲಿ ಅದಕ್ಕೆಂದೇ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ಹಾಕಬೇಕು.
6. ದಿನಾಂಕಃ 20.09.2006 ಮತ್ತು 27.09.2006ರ ಸಂಜೆ 5.00 ಗಂಟೆಗೆ ಹಾಜರಿರುವ ಗುತ್ತಿಗೆದಾರರ/ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.

7. ಟೆಂಡರ್‌ಗಳನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಅಥವಾ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ವೃತ್ತ, ಬೆಂಗಳೂರು ಇವರಿಗೆ ಇರುತ್ತದೆ. ತಿರಸ್ಕೃತ ಟೆಂಡರ್‌ಗಳಿಗೆ ಕಾರಣ ನೀಡಲಾಗುವುದಿಲ್ಲ.

8. ಯಶಸ್ವಿ ಟೆಂಡರ್‌ದಾರರು ಕೆಲಸದ ಆದೇಶ ಕೊಟ್ಟ ಮೂರು ದಿನಗಳೊಳಗೆ ಈ ಕಛೇರಿಯಲ್ಲಿ ರೂ. 200/-ರ ಛಾಪಾ ಕಾಗದದ ಮೇಲೆ ಕರಾರು ಮಾಡಿಕೊಟ್ಟು ಕೆಲಸದ ಆದೇಶ ಪಡೆಯುವುದು.

9. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.

10. ಇಎಂಡಿ ಹಣವನ್ನು ಯಶಸ್ವಿ ಟೆಂಡರ್‌ದಾರರಿಗೆ ಟೆಂಡರ್ ಕ್ರಮ ಮುಗಿದ ನಂತರ ಚೆಕ್ ಮೂಲಕ ಹಿಂದಿರುಗಿಸಲಾಗುವುದು.

11. ಪ್ರತಿ ಬಿಲ್‌ನಲ್ಲಿ ಶೇಕಡ 2% ರಷ್ಟನ್ನು ಆಧಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್‌ಚಾರ್ಜನ್ನು ತೆರಿಗೆಯಾಗಿ ನಿಯಮಾನುಸಾರ ಹಿಡಿಯಲಾಗುವುದು.

12. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು ಬೆಂಗಳೂರು ವೃತ್ತ, ಬೆಂಗಳೂರು ಇವರ ನಿರ್ದಾರವೇ ಅಂತಿಮ ನಿರ್ಧಾರವಾಗಿರುತ್ತದೆ.

13. ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಲೋಕೋಪಯೋಗಿ / ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ / ಸಣ್ಣ ನೀರಾವರಿ / ಅರಣ್ಯ ಇಲಾಖೆ / ತೋಟಗಾರಿಕೆ ಇಲಾಖೆ 2006-07ನೇ ಸಾಲಿನ ದರಕ್ಕಿಂತ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂಬುದನ್ನು ನಮೂದಿಸಬೇಕು.

14. ಕೆಲಸದ ಆದೇಶ ನೀಡಿದ ನಂತರ ಸದರಿ ಕಾಮಗಾರಿಗಳನ್ನು 31.03.2007 ರೊಳಗೆ ಪೂರ್ಣಗೊಳಿಸತಕ್ಕದ್ದು.

15. ಗುತ್ತಿಗೆ ಪಡೆದ ನಂತರ 31.03.2007 ರೊಳಗೆ ಕೆಲಸ ಪೂರೈಸದಿದ್ದಲ್ಲಿ ಗುತ್ತಿಗೆದಾರರ ಸ್ವಂತ ಜವಾಬ್ದಾರಿ ಮತ್ತು ಖರ್ಚಿನಲ್ಲಿ ಸದರಿ ಕೆಲಸವನ್ನು ಬೇರೆ ಗುತ್ತಿಗೆದಾರರಿಗೆ ವಹಿಸಿ ಪೂರೈಸಲು ಅಥವಾ ಇಲಾಖಾ ಮೂಲಕ ಪೂರೈಸಲು ಸಂಪೂರ್ಣ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರಿಗೆ ಇರುತ್ತದೆ.

16. ಗುತ್ತಿಗೆದಾರರು ನಿಗಧಿತ ಅವಧಿಯಲ್ಲಿ ಕಾಮಗಾರಿ ಪೂರೈಸದಿದ್ದಲ್ಲಿ ಮತ್ತು ಅರ್ಧಕ್ಕೆ ನಿಲ್ಲಿಸಿದಲ್ಲಿ ಗುತ್ತಿಗೆದಾರರು ಪೂರೈಸಿದ ಕಾಮಗಾರಿಗೆ ಹಣ ಪಾವತಿಗೆ ಅರ್ಹರಿರುವುದಿಲ್ಲ.

17. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಕೆರೆಗಳ ಉಪ ವಿಭಾಗ, ಬೆಂಗಳೂರು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲಿನ ಹಣ ಪಾವತಿಸಲಾಗುವುದು.

18. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡ ಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.

19. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕೆರೆಯ ಅಭಿವೃದ್ಧಿ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.

20. ಟೆಂಡರುದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.

21. ಕೆಲಸದಲ್ಲಿ ಏನಾದರೂ ಬದಲಾವಣೆ ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ದವಾಗಿರುವುದಿಲ್ಲ.

22. ಲೋಕೋಪಯೋಗಿ / ಬೆಂಗಳೂರು ನೀರು ಸರಬರಾಜು ಒಳಚರಂಡಿ ಮಂಡಳಿ / ಸಣ್ಣ ನೀರಾವರಿ / ಅರಣ್ಯ ಇಲಾಖೆ / ತೋಟಗಾರಿಕೆ ಇಲಾಖೆ ದರಪಟ್ಟಿಯಲ್ಲಿ ನಮೂದಿಸಿರುವಂತೆ, ಉತ್ತಮ ಗುಣಮಟ್ಟದ ಸಾಮಾಗ್ರಿಗಳನ್ನು ಮಾತ್ರ ಕೆರೆ ಅಭಿವೃದ್ಧಿ ಕೆಲಸಕ್ಕೆ ಉಪಯೋಗಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ನಗರ ವಿಭಾಗ, ಬೆಂಗಳೂರು

ಪಿ.ಆರ್. 543

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು

ಸಂಖ್ಯೆ:ಎ೨.ಬಿಯುಡಿ.ಬಿಎಂಆರ್‌ಟಿ.ವಿವ- 27/06-07, ದಿನಾಂಕ: 04ನೇ ಆಗಸ್ಟ್ 2006

ಸಂಕ್ಷಿಪ್ತ ಟೆಂಡರ್ ಪ್ರಕಟಣೆ

ವಿಷಯ:- 2006-07ನೇ ಸಾಲಿನಲ್ಲಿ ಬೆಂಗಳೂರು ನಗರ ವಿಭಾಗದಲ್ಲಿ ಮೆಟ್ರೋ ರೈಲು ಯೋಜನೆಯಡಿ ಕೈಗೊಳ್ಳಲಿರುವ ಅರಣ್ಯೀಕರಣ ಕಾಮಗಾರಿಗಳ ಕುರಿತು.

2006-07ನೇ ಸಾಲಿನಲ್ಲಿ ಬೆಂಗಳೂರು ನಗರ ವಿಭಾಗದಲ್ಲಿ ಮೆಟ್ರೋ ರೈಲು ಯೋಜನೆಯಡಿ ಅರಣ್ಯೀಕರಣ ಕಾಮಗಾರಿಗಳನ್ನು ಕೈಗೊಳ್ಳಲು ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ.

ದಿನಾಂಕ: 20.09.2006 ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು. ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಸದರಿ ದಿನಾಂಕದಂದು ಟೆಂಡರ್‌ದಾರರ ಸಮ್ಮುಖದಲ್ಲಿ

ಟೆಂಡರ್ ಲಕೋಟೆಯನ್ನು ಅಪರಾಹ್ನ 4 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಯಾವುದೇ ಟೆಂಡರ್ ಬಾರದಿದ್ದಲ್ಲಿ ಅಥವಾ ಕಾರಣಾಂತರದಿಂದ ಟೆಂಡರ್ ನಡೆಯದಿದ್ದಲ್ಲಿ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು, ಪುನಃ 27.09.2006ರಂದು 4 ಗಂಟೆಗೆ ಎರಡನೇ ಬಾರಿಗೆ ನೊಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು ಅದೇ ದಿನ 4 ಗಂಟೆಗೆ ತೆರೆಯಲಾಗುವುದು. ಈ ಬಗ್ಗೆ ಪ್ರತ್ಯೇಕ ಪ್ರಕಟಣೆ ಹೊರಡಿಸಲಾಗುವುದಿಲ್ಲ.

| ಕ್ರ. ಸಂ. | ವಲಯದ ಹೆಸರು | | ಕಾಮಗಾರಿ ವಿವರ | ಟೆಂಡರ್‌ನ ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂಗಳಲ್ಲಿ) | ಕಾಮಗಾರಿ ಪೂರೈಸ ಬೇಕಾದ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಂಗಳೂರು | ಬಿಡಬ್ಲ್ಯೂಎಸ್‌ಎಸ್‌ಬಿ, ಸಿಂಗಾಪುರ ಬಡಾವಣೆ ಜಾಲಹಳ್ಳಿ ಲೇಔಟ್ | ರಸ್ತೆ ಬದಿ ನೆಡುತೋಪು ಬೆಳೆಸುವುದು | Rs. 1.824/- | Rs.4560/- | 31.03.07 |
| 2 | ಅಲಸೂರು | ತಣೀಸಂದ್ರ ಬಿಡಿಎ ಲೇಔಟ್ | ---“--- | Rs. 1.824/- | Rs.4560/- | |
| 3 | ರಾಜಾಜಿನಗರ | ಐಬಿ ಆಫೀಸರ್ಸ್ ಕಾಲೋನಿ ವಲಗೇರಹಳ್ಳಿ | ---“--- | Rs. 1.824/- | Rs.4560/- | |
| 4 | ವೃಕ್ಷಘಟಕ (ಉ) | ಭವಾನಿನಗರ 2ನೇ ಹಂತ, ರೈಲ್ವೆಮೆನ್ಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲೇಔಟ್ ಮಲ್ಲತ್‌ಹಳ್ಳಿ | ---“--- | Rs. 1.824/- | Rs.4560/- | |
| 5 | ಯಲಹಂಕ | ಸೂರ್ಯವಂಶಿ ಲೇಔಟ್ ಬೆಂಗಳೂರು - ದೊಡ್ಡ ಬಳ್ಳಾಪುರ ರಸ್ತೆ ನಾಗೇನಹಳ್ಳಿಗೇಟ್ ಹತ್ತಿರ ಮಹಾವೀರ ರೆಸಿಡೆನ್ಸಿಯಲ್ ಲೇಔಟ್ | ---“--- | Rs. 1.824/- | Rs.4560/- | |
| 6 | ಕಗ್ಗಲೀಪುರ | ಬನಶಂಕರಿ 6ನೇ ಹಂತ 5ನೇ ಬ್ಲಾಕ್ | ---“--- | Rs. 1.824/- | Rs.4560/- | |
| 7 | ಕೆ.ಆರ್.ಪುರಂ | ಸಾದೇನಪಾಳ್ಯ ಲೇಔಟ್ ವೈಟ್‌ಫೀಲ್ಡ್ ಹತ್ತಿರ | ---“--- | Rs. 1.824/- | Rs.4560/- | |

ನಿಬಂಧನೆಗಳು

1. ಟೆಂಡರ್ ಫಾರಂಗಳನ್ನು ಫಾರಂಗೆ ರೂ.200/-ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕಃ 20.09.2006ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2006-07ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರಬೇಕು. ತಪ್ಪಿದಲ್ಲಿ ಅಂತವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಮೊಹರು ಮಾಡಿದ ಲಕೋಟೆಯಲ್ಲಿ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿನಾಂಕಃ20.09.2006ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕಃ27.09.2006ರಂದು ಅಪರಾಹ್ನ 4.00 ಗಂಟೆಯವರೆಗೆ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಹಾಗೂ ಅದೇ ದಿನ 4 ಗಂಟೆಗೆ ಟೆಂಡರ್‌ನ್ನು ತೆರೆಯಲಾಗುವುದು. ಈ ಬಗ್ಗೆ ಮತ್ತೇ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ದ ಕೆಲಸಗಳಾಗಿದ್ದು ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್‌ಗೆ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರ್‌ನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.

5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.

6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗಧಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಪರವಾಗಿ ಯಾವುದಾದರು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.

7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು, ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.

8. ನಿಗಧಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

9. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.

10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಹೊಂದಿರುತ್ತಾರೆ.

11. ಈ ಮೇಲಿನ ಕಾಮಗಾರಿ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.

12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ.) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್‌ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.

13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜಾರಿಗೊಳಿಸಲಾಗುವುದು.

14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.

15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.

16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯ ಗುತ್ತಿಗೆದಾರರ ಮತ್ತು ಅವರ ನೌಕರಿಗೆ ಯಾವುದೇ ನಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.

17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ಧರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.

18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ / ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು, ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರುತ್ತಾರೆ.

19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ನಿರ್ದೇಶನದಂತೆ ಪೂರ್ಣಗೊಳಿಸತಕ್ಕದ್ದು, ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ಧರಗಳಲ್ಲಿ ಶೇ.5ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20. ಟೆಂಡರ್‌ನ್ನು ಕಂಪನಿಯ ವತಿಯಿಂದ / ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ

ಅ. ಕಂಪನಿಯು / ಸಂಘ ಸಂಸ್ಥೆಗಳ ನೊಂದಾಯಿತ ಸಂಸ್ಥೆಗಳಾಗಿರಬೇಕು.

ಆ. ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorny) ಪಡೆದುಕೊಂಡವನಾಗಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

21. ಅರಣ್ಯ ಕೂಲಿಗಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು. ಹಾಗೂ ಸಂಘಗಳ ನೊಂದಣಿ ನಿಯಮದಂತೆ ಸಂಘಗಳು ಕಡ್ಡಾಯವಾಗಿ ನೊಂದಣಿಯಾಗಿರಬೇಕು ಇಲ್ಲವಾದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರ್‌ನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಅಂತಹ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963ರ ಕಾಲಂ 109 ಮತ್ತು 119ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

23. ಯಶಸ್ವಿಯಾದ ಬಿಡ್‌ದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇ.5% ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು, ಈ ಹಣವನ್ನು ನೆಡುತೋಪು ನಿರ್ಮಾಣದ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.

24. ಕೆಲಸ ಪೂರ್ಣಗೊಂಡ ದಿನಾಂಕದಿಂದ 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುವುದು. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.

25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ / ಇನ್ನಿತರೆ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.

26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.

28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗರವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ಧರಾಗಿರಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 544 ಬೆಂಗಳೂರು ನಗರ ವಿಭಾಗ, ಬೆಂಗಳೂರು

**ಅರಣ್ಯ ಕೃಷಿಕರು, ಕೇಂದ್ರ ವಲಯ, ಅರೆಕೆರೆ ಮೈಕೋ ಲೇಔಟ್, ದೊರೆಸಾನಿಪಾಳ್ಯ, ಬೆಂಗಳೂರು – 560 086.**

**ಮೈಫಾರೆಸ್ಟ್ ನಿಯತಕಾಲಿಕೆಯನ್ನು ಮತ್ತು ಸಿಲ್ವಾಸ್ ನ್ಯೂಸ್ ಲೆಟರ್‌ನ ಮುದ್ರಣ ಮಾಡಲು**

**ಮರು ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ6–ಮೈಫಾರೆಸ್ಟ್–ಜನರಲ್–ಸಿಆರ್–5 /2006-07, ದಿನಾಂಕ: 07ನೇ ಸೆಪ್ಟೆಂಬರ್ 2006**

2006–08ನೇ ಸಾಲಿಗೆ "ಮೈಫಾರೆಸ್ಟ್" ತ್ರೈಮಾಸಿಕ ನಿಯತಕಾಲಿಕೆಯನ್ನು ಹಾಗೂ ಮಾಸಿಕ "ಸಿಲ್ವಾಸ್ ನ್ಯೂಸ್ ಲೆಟರ್" ಗಳನ್ನು ಮುದ್ರಣ ಮಾಡಲು ಈ ವಿಭಾಗದಲ್ಲಿ ನೋಂದಾಯಿತ ಅನುಭವಿ ಮುದ್ರಣಕಾರರಿಂದ ದಿನಾಂಕ: 09–10–2006 ರಂದು ಸಲ್ಲಿಸಲು ಟೆಂಡರ್ ಕರೆಯಲಾಗಿದೆ. ನಿಗಧಿತ ನಮೂನೆಯಲ್ಲಿ ಟೆಂಡರ್ ಅರ್ಜಿ ಫಾರಂಗಳನ್ನು ಪಡೆದು ಟೆಂಡರ್‌ನ್ನು ಸಲ್ಲಿಸಬಹುದಾಗಿದೆ. ಒಂದು ವೇಳೆ 09–10–2006 ರಂದು ಯಾವುದೇ ಮುದ್ರಣಕಾರರು ಟೆಂಡರ್‌ನಲ್ಲಿ ಭಾಗವಹಿಸದೇ ಇದ್ದಲ್ಲಿ 09–10–2006 ರ ಟೆಂಡರ್ ನಿಯಮದಂತೆ ದಿನಾಂಕ:11–10–2006 ರಂದು ಮರು ಟೆಂಡರ್ ನಡೆಸಲಾಗುವುದು.

ಟೆಂಡರ್ ಫಾರಂಗಳನ್ನು ದಿನಾಂಕ: 09–10–2006 ರಂದು (01.00 ಗಂಟೆಯವರಿಗೆ) ಈ ಕಛೇರಿಯಲ್ಲಿ ಪಡೆಯಬಹುದಾಗಿದೆ. ಹೆಚ್ಚಿನ ವಿವರಗಳಿಗೆ ಕಛೇರಿ ವೇಳೆಯಲ್ಲಿ ಸಂಪರ್ಕಿಸಲು ಕೋರಲಾಗಿದೆ.

| ಕ್ರಮ ಸಂಖ್ಯೆ | ಕೆಲಸದ ವಿವರಗಳು | ದಸ್ತಾವೇಜು ಸಮಯ | ಟೆಂಡರ್ ದಿನಾಂಕ ಮತ್ತು ಸ್ಥಳ | ಮುಂಗಡ ಠೇವಣಿ ಮೊತ್ತ |
|---|---|---|---|---|
| 1 | ಮೈಫಾರೆಸ್ಟ್ ತ್ರೈಮಾಸಿಕ ನಿಯತಕಾಲಿಕೆ 600 ಪ್ರತಿಗಳು ಒಂದು ಪ್ರತಿ 100 ಪುಟಗಳನ್ನು, 80 ಜಿ.ಎಸ್.ಎಂ. ಹಾಳೆಯಲ್ಲಿ ಆಫ್‌ಸೆಟ್‌ನಲ್ಲಿ ವಿಷಯ ಒಂದೇ ಬಣ್ಣದಲ್ಲಿ ಹಾಗೂ ಮುಖ ಪುಟ ಮತ್ತು ಹಿಂದಿನ ಪುಟ ನಾಲ್ಕು ಬಣ್ಣಗಳಲ್ಲಿ ಮುದ್ರಣ ಮಾಡುವುದು | ತ್ರೈಮಾಸಿಕ ಜೂನ್–2006 ರಿಂದ ಮಾರ್ಚ್ 2008 ರವರೆಗೆ (2 ವರ್ಷಗಳು – 8 ಸಂಚಿಕೆಗಳು) | 09–10–2006 ರಂದು ಮಧ್ಯಾಹ್ನ 3.00 ಗಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ಕಛೇರಿಯಲ್ಲಿ | 10,000/– |

| | | | | |
|---|---|---|---|---|
| 2 | ಸಿಲ್ವಾಸ್ ನ್ಯೂಸ್ ಲೆಟರ್ 1200 ಪ್ರತಿಗಳನ್ನು 4 ಪುಟಗಳನ್ನು 100 ಜಿ.ಎಸ್.ಎಂ ಹಾಳೆಯಲ್ಲಿ ಆಫ್‌ಸೆಟ್‌ನಲ್ಲಿ ವಿಷಯ ಒಂದೇ ಬಣ್ಣದಲ್ಲಿ ಹಾಗೂ ಮುಖ ಪುಟ ಎರಡು ಬಣ್ಣಗಳಲ್ಲಿ ಮುದ್ರಣ ಮಾಡುವುದು. | ಮಾಸಿಕ ಏಪ್ರಿಲ್–2006 ರಿಂದ ಮಾರ್ಚ್ 2008 ರವರೆಗೆ (2 ವರ್ಷಗಳು 24 ಸಂಚಿಕೆಗಳು) | 09–10–2006 ರಂದು ಮಧ್ಯಾಹ್ನ 3.00 ಗಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ರವರ ಕಛೇರಿಯಲ್ಲಿ | 5,000/– |

ಅರಣ್ಯ ಕೃಷಿಕರು,
ಕೇಂದ್ರ ವಲಯ, ಬೆಂಗಳೂರು.

ಪಿ.ಆರ್. 558

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ,**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ1 : ಬಿಯುಡಿ : ಟೆಂಡರ್ : ವಿವಿಧ : 2006-07, ದಿನಾಂಕ: 01ನೇ ಸೆಪ್ಟೆಂಬರ್ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕರ್ನಾಟಕ ರಾಜ್ಯಪಾಲರ ಪರವಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ರವರು 2006-07 ನೇ ಸಾಲಿನಲ್ಲಿ ಈ ವಿಭಾಗದ ಶಿವಮೊಗ್ಗ ವನ್ಯಜೀವಿ ವಲಯದ ವ್ಯಾಪ್ತಿಯ ಆನೆಸರ ಎಸ್.ಎಫ್. ಪ್ರದೇಶದಲ್ಲಿ ಅನುಸೂಚಿಯಲ್ಲಿ ನಮೂದಿಸಿರುವ ಆನೆ ನಿರೋಧಕ ಕಂದಕ ಕಾಮಗಾರಿಗಾಗಿ, 2006-07 ನೇ ಸಾಲಿನ ಈ ವಿಭಾಗದ ಅರಣ್ಯ ಗುತ್ತಿಗೆದಾರರಾಗಿದ್ದು, ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಯ ಚಾಲ್ತಿ ವರ್ಷದ "ಸಿ" ಮತ್ತು "ಡಿ" ದರ್ಜೆ ಹಾಗೂ ಮೇಲ್ಪಟ್ಟ ದರ್ಜೆಯ ನೊಂದಾಯಿತ ಗುತ್ತಿಗೆದಾರರಿಂದ ದಿನಾಂಕ: 27.09.2006 ರಂದು ಮಧ್ಯಾಹ್ನ 4.00 ಗಂಟೆಯ ವರೆಗೆ ಮೊಹರಾದ ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ಆಹ್ವಾನಿಸಲಾಗಿದೆ. ಮತ್ತು ಅದೇ ದಿನದಂದು ಸಂಜೆ 4.30 ಕ್ಕೆ ಕೆಳಗೆ ಸಹಿಮಾಡಿರುವವರಿಂದ ಅಥವಾ ಅವರಿಂದ ಅಧಿಕಾರ ಹೊಂದಿದ ಅಧಿಕಾರಿಗಳ ಸಮಕ್ಷಮ ತೆರೆಯಲಾಗುವುದು.

**ಅನುಸೂಚಿ**

| ಘಟಕ ಸಂ. | ವಲಯ | ಕಾಮಗಾರಿ ವಿವರ | ಅಂದಾಜು ಮೊತ್ತ ರೂ. (ಲಕ್ಷಗಳಲ್ಲಿ) | ಮುಂಗಡ ಠೇವಣಿ (ರೂ.ಗಳಲ್ಲಿ) | ಕಾಮಗಾರಿಯನ್ನು ಮುಕ್ತಾಯಗೊಳಿಸ ಬೇಕಾದ ದಿನಾಂಕ |
|---|---|---|---|---|---|
| 1 | ಶಿವಮೊಗ್ಗ ವನ್ಯಜೀವಿ ವಲಯ, ಶಿವಮೊಗ್ಗ | ಆನೆಸರ ಎಸ್.ಎಫ್. ಪ್ರದೇಶದಲ್ಲಿ 5.00 ಕಿ.ಮೀ. ಆನೆ ನಿರೋಧಕ ಕಂದಕ ತೆಗೆಯುವುದು. | 7.200 | 18000.00 | ಕಾರ್ಯಾದೇಶ ನೀಡಿದ 30 ದಿನಗಳಲ್ಲಿ |

**ಷರತ್ತುಗಳು**

1. ಟೆಂಡರ್ ಫಾರಂಗಳನ್ನು ದಿನಾಂಕ: 27.09.2006 ರಂದು ಮದ್ಯಾಹ್ನ 1.30 ರವರೆಗೂ ವಿತರಿಸಲಾಗುವುದು. ಟೆಂಡರ್ ಫಾರಂ ಒಂದಕ್ಕೆ ರೂ. 1000.00 ಇದ್ದು, ಇದನ್ನು ಈ ಕೆಳಗೆ ಸಹಿಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಪಡೆದ ಡಿ.ಡಿ. ಮೂಲಕ ದಿನಾಂಕ: 27.09.2006 ರಂದು ಕಛೇರಿ ವೇಳೆಯಲ್ಲಿ ಪಾವತಿಸಿ ಪಡೆಯಬಹುದಾಗಿದೆ. ಈ ಮೊಬಲಗನ್ನು ಹಿಂತಿರುಗಿಸುವುದಿಲ್ಲ.
2. ಟೆಂಡರ್‌ದಾರರು ಟೆಂಡರ್ ಫಾರಂನಲ್ಲಿ ತಮ್ಮ ದರವನ್ನು ನಮೂದಿಸುವಾಗ ಮಂಜೂರಾದ ಅನುಸೂಚಿ ದರದ ಮೇಲೆ ಶೇಖಡಾ ಇಂತಿಷ್ಟು ಕಡಿಮೆ ಅಥವಾ ಹೆಚ್ಚು ಎಂದು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು.
3. ಟೆಂಡರ್‌ದಾರರ ಹೆಸರು ಮತ್ತು ಟೆಂಡರ್ ಕೆಲಸದ ವಿವರಗಳನ್ನು ಒಳಗೊಂಡ ದೊಡ್ಡ ಅಕ್ಷರದಲ್ಲಿ ಬರೆದಿರುವ ಸೀಲ್ ಮಾಡಿದ ಲಕೋಟೆಯಲ್ಲಿ ಇರಿಸಿದ ಟೆಂಡರನ್ನು ಟೆಂಡರ್ ಪೆಟ್ಟಿಗೆಯೊಳಗೆ ದಿನಾಂಕ: 27.09.2006 ರಂದು ಬೆಳಿಗ್ಗೆ 10.00 ಗಂಟೆಯಿಂದ 4.00 ಗಂಟೆಯ ಒಳಗೆ ಹಾಕತಕ್ಕದ್ದು. ಅದೇ ದಿನ ಮದ್ಯಾಹ್ನ 4.30 ಕ್ಕೆ ಈ ಕೆಳಗೆ ಸಹಿಮಾಡಿದ ಅಧಿಕಾರಿಯಾಗಲಿ ಅಥವಾ ಇವರಿಂದ ಅಧಿಕಾರ ಪಡೆದ ಬೇರೆ ಅಧಿಕಾರಿ ಟೆಂಡರ್‌ದಾರರ ಅಥವಾ ಅವರಿಂದ ಅಧಿಕಾರ ಪಡೆದವರ ಸಮಕ್ಷಮದಲ್ಲಿ ಟೆಂಡರ್ ಪೆಟ್ಟಿಗೆಯನ್ನು ತೆರೆಯುತ್ತಾರೆ.
4. ಟೆಂಡರ್‌ದಾರರು, ಟೆಂಡರ್ ಫಾರ್ಂನೊಂದಿಗೆ ಅನುಸೂಚಿಯಲ್ಲಿ ತಿಳಿಸಿದ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿ., ಲೋಕೋಪಯೋಗಿ / ನೀರಾವರಿ / ಅರಣ್ಯ ಇಲಾಖೆಯ ಚಾಲ್ತಿ ವರ್ಷದ ಗುತ್ತಿಗೆ ನೊಂದಣಿಯ ದೃಢೀಕರಣ ಪತ್ರದ ನಕಲು, ಹಾಲಿ ಕೆಲಸ ನಿರ್ವಹಿಸುತ್ತಿರುವ ಕಾಮಗಾರಿಗಳ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
5. ಷರತ್ತುಗಳಿಗೊಳಪಟ್ಟ ಟೆಂಡರ್‌ಗಳನ್ನು, ತಂತಿಸಂದೇಶದ ಮೂಲಕ ಕಳುಹಿಸಿದ ಟೆಂಡರ್‌ಗಳನ್ನು ಅಥವಾ ಅಂಚೆ ಮೂಲಕ ಕಳುಹಿಸಿದ ಟೆಂಡರ್‌ಗಳನ್ನು ಯಾವುದೇ ಕಾರಣಕ್ಕೆ ಅಂಗೀಕರಿಸುವುದಿಲ್ಲ.
6. ಟೆಂಡರ್ ಫಾರ್ಂನಲ್ಲಿ ಎಲ್ಲಾ ತಿದ್ದು ಪಡಿಗಳು, ಹೊಡೆದು ಹಾಕಿರುವುದು, ಓವರ್ ರೈಟಿಂಗ್ ಮಾಡಿರುವುದು ಅಂಗೀಕಾರರ್ಹವಾಗಿರುವುದಿಲ್ಲ. ಕಪ್ಪು ಪಟ್ಟಿಯಲ್ಲಿ ಸೇರಿರುವ ಗುತ್ತಿಗೆದಾರರು ಟೆಂಡರ್ ಹಾಕಲು ಅರ್ಹರಾಗಿರುವುದಿಲ್ಲ. ಹಾಗೂ ಅಂತವುಗಳನ್ನು ತಿರಸ್ಕರಿಸಲಾಗುವುದು.
7. ಸಮಯಮೀರಿ ಸಲ್ಲಿಸುವ ಟೆಂಡರ್ ಹಾಗೂ ನಿಯಮಾನುಸಾರವಿಲ್ಲದ ಟೆಂಡರ್‌ಗಳನ್ನು ಯಾವುದೇ ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.

8. ಟೆಂಡರ್ ನಿಗಧಿಪಡಿಸಿದ ದಿನಾಂಕದಂದು ಯಾವುದೇ ರಜಾ ದಿನವಾಗಿದ್ದಲ್ಲಿ ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.

9. ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಪಡೆದ ಡಿ.ಡಿ. (ಡಿಮಾಂಡ್ ಡ್ರಾಫ್ಟ್) ರೂಪದಲ್ಲಿ ಅನುಸೂಚಿಯಲ್ಲಿ ನಿಗದಿಪಡಿಸಿದ ಇ.ಎಂ.ಡಿ. ಯನ್ನು ಪ್ರತಿಯೊಂದು ಟೆಂಡರ್ ಫಾರ್ಂನೊಂದಿಗೆ ಲಗತ್ತಿಸಿರಬೇಕು. ಇ.ಎಂ.ಡಿ. ಬಾಬ್ತು ನಗದಾಗಲೀ ಅಥವಾ ಚೆಕ್ಕುಗಳನ್ನಾಗಲೀ ಟೆಂಡರ್ ಫಾರಂನೊಂದಿಗೆ ಲಗತ್ತಿಸಿದಲ್ಲಿ ಅಂಥಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

10. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯ ಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಡಿ. 536

**ಶಿಕ್ಷಣ ಇಲಾಖೆ**

**ರಾಜ್ಯ ಟೆಂಡರ್ ಬುಲೆಟಿನ್**

**ಸಂಖ್ಯೆ: ಶಿಇ 11 ವಿವಿಧ 2006, ದಿನಾಂಕ: 08ನೇ ಸೆಪ್ಟೆಂಬರ್ 2006**

2007-08ನೇ ಸಾಲಿಗೆ 1 ರಿಂದ 10ನೇ ತರಗತಿಯವರೆಗಿನ ಸರ್ಕಾರಿ ಪಠ್ಯಪುಸ್ತಕಗಳನ್ನು ಮುದ್ರಿಸಲು, ಅಗತ್ಯವಿರುವ ಮುದ್ರಣ ಕಾಗದ ಖರೀದಿ ಹಾಗೂ ಮುದ್ರಣಾಲಯಗಳಿಗೆ ಸರಬರಾಜಿಗಾಗಿ ವ್ಯಾಟ್ ನೋಂದಾಯಿತ ಅರ್ಹ ತಯಾರಕರಿಂದ ರಾಷ್ಟ್ರ ಮಟ್ಟದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದ್ದು, ವಿವರಗಳನ್ನು ರಾಜ್ಯ ಟೆಂಡರ್ ಬುಲೆಟಿನ್ ಆಗಿ 2ನೇ ವಾರದ ಸೆಪ್ಟೆಂಬರ್ 2006 ಭಾಗದಲ್ಲಿ ಪ್ರಕಟಿಸಲಾಗಿದೆ. ಟೆಂಡರ್ ವಿವರಗಳನ್ನು ಭಾಗ-1ರಲ್ಲಿ ಇದರೊಂದಿಗೆ ಲಗತ್ತಿಸಲಾಗಿದೆ.

**ಎಸ್. ದಿವಾಕರ್**
ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ ಮತ್ತು ಸರ್ಕಾರದ ಉಪ ಕಾರ್ಯದರ್ಶಿ,
ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು 560 001.

**ವ್ಯವಸ್ಥಾಪಕ ನಿರ್ದೇಶಕರ ಕಛೇರಿ, ಕರ್ನಾಟಕ ಪಠ್ಯಪುಸ್ತಕ ಸಂಘ, ನಂ. 4, 100 ಅಡಿ ವರ್ತುಲ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560085.**

**ಟೆಂಡರ್ ಅಧಿಸೂಚನೆ ಸಂಖ್ಯೆ: ಎ6 / ಕಪಪುಸಂ / ಮುಕಾಸ / 1 / 2006-07, ದಿನಾಂಕ: 24ನೇ ಆಗಸ್ಟ್ 2006**

**ವಿಷಯ :** 2007-08 ನೇ ಶೈಕ್ಷಣಿಕ ಸಾಲಿನ ಪಠ್ಯಪುಸ್ತಕಗಳಿಗಾಗಿ 2006-07 ನೇ ಸಾಲಿಗೆ ಪಠ್ಯ ಪುಸ್ತಕ ಮುದ್ರಣ ಕಾಗದ ಖರೀದಿಗಾಗಿ ರಾಷ್ಟ್ರ ಮಟ್ಟದ ಟೆಂಡರ್ ಪ್ರಕಟಣೆ ಕುರಿತು.

2007-08ನೇ ಶೈಕ್ಷಣಿಕ ಸಾಲಿನ ಪಠ್ಯಪುಸ್ತಕಗಳಿಗಾಗಿ 2006-07ನೇ ಸಾಲಿನಲ್ಲಿ 1 ರಿಂದ 10ನೇ ತರಗತಿಯವರೆಗಿನ ಸರ್ಕಾರಿ ಪಠ್ಯಪುಸ್ತಕಗಳನ್ನು, ಮುದ್ರಿಸಲು, ಅಗತ್ಯವಿರುವ ಮುದ್ರಣ ಕಾಗದ ಖರೀದಿ ಹಾಗೂ ಮುದ್ರಣಾಲಯಗಳಿಗೆ ಸರಬರಾಜಿಗಾಗಿ ಅರ್ಹ ತಯಾರಕರಿಂದ ಪಾರದರ್ಶಕ ಕಾಯ್ದೆ ಅನ್ವಯ 2 ಲಕೋಟೆಯಲ್ಲಿ ರಾಷ್ಟ್ರ ಮಟ್ಟದ ಟೆಂಡರ್ ಕರೆಯಲಾಗಿದೆ. ಟೆಂಡರ್ ಅರ್ಜಿಗಳನ್ನು ದಿನಾಂಕ: 28.08.2006 ರಿಂದ 27.09.2006 ರ ಪೂರ್ವಾಹ್ನ 12 ಗಂಟೆಯವರೆಗೂ ಕಛೇರಿ ಕೆಲಸದ ದಿನಗಳಲ್ಲಿ ಮಾರಾಟ ಮಾಡಲಾಗುವುದು. ಪ್ರತಿ ಅರ್ಜಿ ಬೆಲೆ ರೂ. 10,000/- (ರೂಪಾಯಿ ಹತ್ತು ಸಾವಿರ ಮಾತ್ರ) ಹಾಗೂ ಶೇ. 12.5 ರಂತೆ ವ್ಯಾಟ್ ರೂ: 1250=00 ಒಟ್ಟು ರೂ: 11,250=00 ಮೊತ್ತಕ್ಕೆ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು ಇವರ ಹೆಸರಿಗೆ ಡಿ.ಡಿ ನೀಡಿ ಅರ್ಜಿ ಫಾರಂ ಖುದ್ದಾಗಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: 27.9.2006 ರ ಅಪರಾಹ್ನ 2 ಗಂಟೆಯವರೆವಿಗೂ ಸ್ವೀಕರಿಸಲಾಗುವುದು. ಟೆಂಡರ್ ಅಧಿಸೂಚನೆಯಲ್ಲಿ ತಿಳಿಸಿರುವಂತೆ ಸಂಸ್ಥೆಯ ಮಾಹಿತಿಯನ್ನು ಲಕೋಟೆ-1 ರಲ್ಲಿ ಮತ್ತು ದರಪಟ್ಟಿಯನ್ನು ಲಕೋಟೆ-2 ರಲ್ಲಿ ಸಲ್ಲಿಸತಕ್ಕದ್ದು. ಲಕೋಟೆ 1ನ್ನು ದಿನಾಂಕ: 27.9.2006 ರ ಅಪರಾಹ್ನ 3 ಗಂಟೆಗೆ, ಮತ್ತು ಲಕೋಟೆ 2 ನ್ನು ದಿನಾಂಕ: 05.10.2006 ರ ಬೆಳಿಗ್ಗೆ 11.00 ಗಂಟೆಗೆ ತೆರೆಯಲಾಗುವುದು. ದಿನಾಂಕ: 14.9.2006ರ ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯ ಸಭಾಂಗಣದಲ್ಲಿ ಪ್ರೀಬಿಡ್ ಸಭೆಯನ್ನು ಏರ್ಪಡಿಸಲಾಗಿದೆ.
ಹೆಚ್ಚಿನ ವಿಷಯವನ್ನು ಕರ್ನಾಟಕ ಪಠ್ಯಪುಸ್ತಕ ಸಂಘದ ಕಛೇರಿಯ ವೆಬ್ ಸೈಟ್ ನಲ್ಲಿ ಪಡೆಯಬಹುದು.
Dsert.kar.nic.in ಅಥವಾ
Education. vsnl.com/dsert

ವ್ಯವಸ್ಥಾಪಕ ನಿರ್ದೇಶಕರು,
ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ಪಿ.ಆರ್. 560

**FORM IV**

**(See Rule 12)**

**NOTICE**

It is hereby notified that the undersigned has changed his name from **MAILARAPPA S/O. MALASHIDDAPPA MADAR** to **MAILARAPPA S/O. MALASHIDDAPPA GUDIMUNDIN.**

P.D. 172 **MAILARAPPA S/O. MALASHIDDAPPA MADAR**

**Office of the Deputy Director, Public Instruction, Belgaum**

**FORM I**

**(See Rule 9)**

**NOTIFICATION**

**BASAPPA BALAPPA HARIJAN** working as Teacher at Govt. High School, Gudas, Tq: Hukkeri District, Belgaum in the Education Department of office of the Block Educational Officer Hukkeri is permitted to change his name to **BASAVARAJ BALAPPA KADABIN.**

Block Education Officer
P.D. 171 Hukkeri.

**ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು**

**ಟೆಂಡರ್ ತಿದ್ದುಪಡಿ**

**ಸಂಖ್ಯೆ: ಕಾಇ : ವಿವಿ : ರ ಮತ್ತು ಕ : ಬೆಂ : ಸಇ-1 : 2006-07 : 2149-59, ದಿನಾಂಕ: 07ನೇ ಸೆಪ್ಟೆಂಬರ್ 2006**

ಈ ಕಛೇರಿಯ ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: 11:2006-07 : ದಿನಾಂಕ: 19.8.2006 ರಲ್ಲಿ ಕ್ರಮ ಸಂಖ್ಯೆ: 1 ರಿಂದ 14 ರವರೆಗೆ ವಿವಿಧ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳಿಗಾಗಿ ಟೆಂಡರ್ ಕರೆಯಲಾಗಿದ್ದು, ಈ ಕಾಮಗಾರಿಗಳನ್ನು ಪೂರ್ಣಗೊಳಿಸಲು ನಿಗಧಿಪಡಿಸಲಾಗಿದ್ದ ಕಾಲಾವಧಿಯನ್ನು 12 ಮತ್ತು 9 ತಿಂಗಳ ಬದಲಾಗಿ 6 (ಆರು) ತಿಂಗಳೆಂದು ಓದಿಕೊಳ್ಳಲು ಈ ಮೂಲಕ ತಿಳಿಸಲಾಗಿದೆ. ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆಯಿರುವುದಿಲ್ಲ.

ಕಾರ್ಯಪಾಲಕ ಅಭಿಯಂತರರು,
ಪಿ.ಆರ್. 555 ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು.

**Office of the Executive Engineer, N.H. Division, Chitradurga,**

**TENDER EXTENTION NOTIFICATION**

**(TWO-COVER BID SYSTEM)**

**No. NHD/CTA/AE1/TND-NOTI/NH-63/BRG-Spl., Rpr.,/06-07/2588, Dated: 4th September 2006.**

The tenders for the following works called vide this office tender notification No/NH D /CT A / AE1/TND-NOTI/NH-63/BRG-SPL, Rpr / 06-07 / 1105 dated 29-06-2006 has been postponed as under and the following modification are effected :

| Item | As Notified | To be read as |
|---|---|---|
| **Name of the work -** 1) | Reconstruction of Bridge at Ch: 317.96 (Minor Bridge No. 318/2) on N.H. 63, ankola-Gooty Section | Reconstruction of Bridge No. 318/2 at km 317.960 of NH 63 Ankola-Gooty section |
| 2) | Special repairs to damaged carriage way from Km 285.00 to 358.00 (in selected reaches) of N.H. 63, Ankola- Gooty Section | Rehabilitation to damaged carriageway from km 285.00 to 358.00 (selected stretches aggregating to 3.711km) of Ankola-gooty section of NH 63. |
| **Approximate amount put to tender Rs. in lakhs 1)** | Rs. 283.00 | Rs. 230.00 |
| **2)** | Rs. 337.00 | Rs. 310.00 |
| **EMD in Rs. 1)** | Rs. 283000/- | Rs. 230000/- |
| **2)** | Rs. 337000/- | Rs. 310000/- |
| **Schedule dates is as under** | | |
| a) Last date for receipt of application and issue of Blank tender forms | Up to 09-09-2006 (During working hours) | Up to 07-10-2006 (During working hours) |
| 1. Date of Receipt of Technical and Financial Bid | 11.09.2006 up to 4.00 PM | 09.10.2006 up to 4.00 PM |
| 2. Opening of technical Bid | 11.09.2006 at 5.00 PM or any other date and time, which will be intimated in due course | 09.10.2006 at 5.00 PM or any other date and time which will be intimated in due course |
| 3. Date of opening of Financial bid of technically qualified tenders | 18.09.2006 at 5.00 PM or any other Date and time, which will be intimated in due course. | 16.10.2006 at 5.00 PM or any other Date and time which will be intimated in due course. |

All other conditions in the Notification No. 1105-dated 29.06.2006 are remains unchanged.

**B. PRABHAKARA SETTY**
Executive Engineer,
P.R. 556 NH Division, Chitradurga.

**ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು,**

**ಹರಾಜು ಪ್ರಕಟಣೆ**

**ಸಂಖ್ಯೆ : ಎ5–ಉಗ್ರಾಣ–ಮಹೇಂದ್ರ ಜೀಪು–ವಾಹನಗಳು–ಹರಾಜು–2006–07, ದಿನಾಂಕ: 16ನೇ ಆಗಸ್ಟ್ 2006**

**ವಿಷಯ** : ಸರ್ಕಾರಿ ವಾಹನ ಮಹೇಂದ್ರ ಜೀಪು ಸಂಖ್ಯೆ: KA-03-M-1038 ಜೀಪಿನ ಬಗ್ಗೆ.

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ವಿಭಾಗಕ್ಕೆ ಸೇರಿದ ಸರ್ಕಾರಿ ವಾಹನ ಮಹೇಂದ್ರ ಜೀಪು ಸಂಖ್ಯೆ: KA-03-M-1038 ನ್ನು ಹೇಗಿದೆಯೋ ಹಾಗೆ ಎಂಬ ಆಧಾರದ ಮೇಲೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರ ಸಮ್ಮುಖದಲ್ಲಿ ಈ ಕೆಳಗೆ ಸೂಚಿಸಿರುವ ಸ್ಥಳ ಮತ್ತು ದಿನಾಂಕದಂದು ಬೆಳಿಗ್ಗೆ 11.00 ಘಂಟೆಗೆ ಹರಾಜು ಮೂಲಕ ಮಾರಾಟ ಮಾಡಲಾಗುವುದು.

| ಕ್ರಮ ಸಂಖ್ಯೆ | ವಾಹನದ ಸಂಖ್ಯೆ ಮತ್ತು ಹೆಸರು | ಹರಾಜು ದಿನಾಂಕ ಮತ್ತು ಸಮಯ | ಸ್ಥಳ |
|---|---|---|---|
| 1. | ಮಹೇಂದ್ರ ಜೀಪು ಸಂಖ್ಯೆ: KA-03-M-1038 | 16–09–2006 ಬೆಳಿಗ್ಗೆ 11.00 ಘಂಟೆಗೆ | ಅರಣ್ಯ ಕೃಷಿಕರ ಕಛೇರಿ, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು – 560 076. |

ಒಂದು ವೇಳೆ ಅಂದು ಹರಾಜಿನಲ್ಲಿ ಮಾರಾಟವಾಗದೇ ಇದ್ದ ಪಕ್ಷದಲ್ಲಿ ದಿನಾಂಕ: 16–09–2006 ರಂದು ಇದೇ ಹರಾಜು ಪ್ರಕಟಣೆ ಆಧಾರದ ಮೇಲೆ ಅಂತಿಮವಾಗಿ ಹರಾಜು ಮೂಲಕ ಮಾರಾಟ ಮಾಡಲಾಗುವುದು.

**ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ರೂ. 5000.00 ಗಳ ನಗದನ್ನು ಇ.ಎಂ.ಡಿ. ಆಗಿ ಇಟ್ಟು ಭಾಗವಹಿಸಬಹುದು.
2. ಹರಾಜಿನಲ್ಲಿ ಭಾಗವಹಿಸುವವರು ಹರಾಜು ಪ್ರಾರಂಭವಾಗುವ ಮುನ್ನ ಕಛೇರಿಯ ವೇಳೆಯಲ್ಲಿ ವಾಹನಗಳನ್ನು ವೀಕ್ಷಿಸಿ ವಾಹನದ ಪರಿಸ್ಥಿತಿಯನ್ನು ಕುರಿತು ತಪಾಸಿಸಿಕೊಂಡು ಖಾತ್ರಿ ಮಾಡಿಕೊಳ್ಳುವುದು, ವಾಹನವು ಹೇಗಿದೆಯೋ ಹಾಗೆಯಿರುವ ಆಧಾರದ ಮೇಲೆ ಹರಾಜು ಮಾಡಲಾಗುವುದು.
3. ಈ ಹರಾಜಿನಲ್ಲಿ ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ ನಾಲ್ಕನೇ ಒಂದು ಭಾಗ ಹಣವನ್ನು ಮತ್ತು ಪೂರ್ಣ ತೆರಿಗೆಯನ್ನು ಕೂಡಲೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಅವರು ಪಾವತಿಸಿದ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೂಲ ಬಿಡ್ಡುದಾರರ ಸ್ವಂತ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ನಷ್ಟವನ್ನು ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ಅಧಿನಿಯಮ 107ರ ಪ್ರಕಾರ ಕಂದಾಯ ಬಾಕಿ ಎಂದು ವಸೂಲಿ ಮಾಡಲಾಗುವುದು.
4. ಸಂಬಂಧಿಸಿದ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾಗಿ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ ಮುಖಾಂತರ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ಪಡೆದ ದಿನದಿಂದ 60 ದಿನಗಳೊಳಗೆ ಯಶಸ್ವಿ ಬಿಡ್ಡುದಾರರು ಉಳಿದ ಮುಕ್ಕಾಲು ಭಾಗ ಹರಾಜಿನ ಮೊತ್ತದ ಹಣವನ್ನು – "ಸ್ವೀಕೃತಿ ಅಜ್ಞೆ" ಯ ಪ್ರತಿ ತಲುಪಿದ 15 (ಹದಿನೈದು) ದಿನಗಳೊಳಗೆ ಕಟ್ಟಿ ವಾಹನವನ್ನು ಬಿಡಿಸಿಕೊಳ್ಳುವುದು. ತಪಿದ್ದಲ್ಲಿ ಸಂಬಂಧನ್ವಯ ಸಂಖ್ಯೆ: 0(3) ಪ್ರಕಾರ ಕ್ರಮ ತೆಗೆದುಕೊಳ್ಳಲಾಗುವುದು.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಅರಣ್ಯ ಕೃಷಿಕರು, ಕೇಂದ್ರ ವಲಯ, ಬೆಂಗಳೂರು ಇವರಿಗೆ ಅಧಿಕಾರವಿರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಯು ಹರಾಜನ್ನು ತಿರಸ್ಕರಿಸಬಹುದಾಗಿದೆ.
6. ಹರಾಜನ್ನು ದಿನಾಂಕ: 16–09–2006 ರಿಂದ ಬೆಳಿಗ್ಗೆ 11.00 ಘಂಟೆಗೆ ಅರಣ್ಯ ಕೃಷಿಕರು, ಕೇಂದ್ರ ವಲಯ, ಅರಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು– 560 076 ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ನಡೆಸುವರು. ಅಂದು ಹರಾಜು ಆಗದಿದ್ದಲ್ಲಿ ದಿನಾಂಕ: 16–09–2006 ರಂದು ಇದೇ ಹರಾಜು ಪ್ರಕಟಣೆ ಆಧಾರದ ಮೇಲೆ ಅಂತಿಮವಾಗಿ ಹರಾಜು ಮೂಲಕ ಮಾರಾಟ ಮಾಡಲಾಗುವುದು.
7. ವಾಹನದ ಮಾಲಿಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ಡುದಾರರಿಗಿರುತ್ತದೆ. ಅದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.
8. ಒಂದು ವೇಳೆ ಹರಾಜಿನಲ್ಲಿ ದೋಣ್‌ವಾರು ಆದರೂ ಸಹಾ ಹರಾಜಿನ ಪೂರ್ಣ ಹಣವನ್ನು ಇತರೆ ತೆರಿಗೆಗಳೊಂದಿಗೆ ಹರಾಜು ದಿನವೇ ಪಾವತಿಸಬೇಕು.

ಅರಣ್ಯ ಕೃಷಿಕರು,
ಕೇಂದ್ರ ವಲಯ, ಬೆಂಗಳೂರು.

ಪಿ.ಆರ್. 557

**ಮುದ್ರಣ ಲೇಖನ ಸಾಮಾಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**

**ಸರ್ಕಾರಿ ಮುದ್ರಣಾಲಯ, ನಂ. 6 ಇ, 1ನೇ ಅಡ್ಡರಸ್ತೆ, ಕೆಐಎಡಿಬಿ, ಪೀಣ್ಯಾ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು 58.**

**TENDER CUM PUBLIC AUCTION**

**Notification No. DPS/P 1904 /2006-07, Dated : 08th September 2006**

**Subject** :- Disposal of Old Unserviceable Machines in the premises of the Joint Director, Govt. Suburban Press, Bangalore, Deputy Director, Government Divisional Press, Dharwad and Gulbarga and Assistant Director, Govt. Branch Press, Madikeri through Tender cum public Auction.

**Ref** :- Governmt letter No. ED 41/LBP/2006, Dated : 16-05-2006

It is hereby notified for the information of the Public that old Unserviceable Printing and Binding Machines as detailed below will be sold by public auction in the premises of the Joint Director, Govt.

Suburban Press, Bangalore, 0n 09-10-2006, Deputy Director, Government Divisional Press, Dharwad on 10-10-2006, Deputy Director, Government Divisional Press, Gulbarga on 11-10-2006 and Assistant Director, Govt. Branch Press, Madikeri on 12-10-2006 at 11-30 am, authorised by the Director of Printing, Stationery & Publications or by his representative on the respective dates. If necessary the auction will be continued on next day. Each machine will be auctioned separately.

2. The highest bidder will ordinarily be the purchaser. But if proper bids are not forthcoming the machine will not be knocked down. The successful bidder should pay the full bid amount, plus Sales Tax both in Cash (No Cheque or Bank Draft will be accepted in this behalf) and take the machines delivery within a week's time.

3. A Sum of Rs. 10,000/- (Rupees Ten thousand) only should be deposited in the form of cash as Earnest Money Deposit in the respective office's by each bidder, giving his name and full address before auction. This will be refunded to the unsuccessful bidder immediately after the auction is concluded. No Cheque will be accepted in this behalf. Earnest Money Deposits will be received in the respective office before one hour of the auction and on the respective dates. If the Earnest Money Deposit is desired by the bidder, to be adjusted towards the cost of bid this will be effected but the bidder concerned will not be eligible to participate after adjustment, in the auction, and no bid by him will be considered after such adjustment.

4. The machine must be cleared within a week time by the Bidder at the risk of the purchaser, failing which, Earnest Money Deposit will be forfeited to Government.

5. Before the bid is made it is required that every bidder shall make himself aquinted and understand the conditions governing this auction. No plea of not understanding, wrong understanding or ignorance of the conditions will not be accepted.

6. The undersigned may without giving any reason thereof accept or refuse the bid of any person or persons.

7. In case any item is not put to auction, the same will be notified on the Notice Board in the respective office, before the auction commence for the day.

8. The increase in bids during the auction shall be an amount of Rs. 100-00 (Rupees one hundred only)

9. The Machine will be put to auction in the order in which they are notified in the schedule or otherwise at the discretion of the auction Officer conducting the auction.(When bids are made and the highest bid is declared for any item the highest bidder of each item should immediately after bid sign with his name in the bid statement for it).

10. In the event of any dispute, the decision of the undersigned shall be final and legally binding in all matters relating to this auction. The machines intended for auction will be made availabe for inspection one week before the auction commences.

11. Any further details can be had from the respective Offices on the working days during office hours in person.

12 Tenderers should submit the Sealed Tender along with Rs. 10,000 E.M.D.so as to reach this office on or before in the above prescribed dates at 11-30 A.M. the Tender without E.M.D. and belated tenders will not be accepted. The highest offer quoted, in sealed tender or in Public Auction which ever is higher will be accepted. The tenderes may also participate in the public auction showing the proof of EMD.

13. Further the concerned officer is reserved the right of acceptance or rejecting above tender cum auction rates on behalf of the Government of Karnataka without assigning any reasons so doing.

14. 1. Joint Director, Govt. Suburban Press, Mysore Road, Bangalore-59, Date of auction on 09-10-2006, at 11-30 AM

| Sl.No. | Name of the Machine | No. Machines |
|---|---|---|
| 1 | 2 | 3 |
| 1. | Auto Film Procecer | 1 No. |
| 2. | Whirler | 1 No. |
| 3. | Web Offset Machine | 1 No. |
| 4. | Printing down Frame | 1 No. |
| 5. | Reel Cutting Machine | 1 No. |
| 6. | RK Lamps | 1 No. |

2 Deputy Director, Govt. Divisional Press, Dharwad. Date of auction on 10-10-2006, at 11-30 AM

| Sl.No. | Name of the Machine | No. Machines |
|---|---|---|
| 1 | 2 | 3 |
| 1. | Mono Key Board and Caster Machine | 1 No. |
| 2. | Lino Machine | 1 No. |
| 3. | Metal Melting Panarasa | 1 No. |
| 4. | Victoria frant A1 size Machine No. 1 and 2. | 2 No. |
| 5. | Mahabeer Machine A1size Machine No. 3 and 4 | 2 No. |
| 6. | P.S.A.-3 Machine A2 size Machine No. 16 and 17 | 2 No. |
| 7. | Bhrammanara Cylinder A3 size Machine No. 13 | 1 No. |

3. Deputy Director, Govt. Divisional Press, Gulbarga. Date of auction on11-10-2006, at 11-30 AM

| Sl.No. | Name of the Machine | No. Machines |
|---|---|---|
| 1 | 2 | 3 |
| 1. | War Pedal | 1 No. |
| 2. | Bhrammanara | 1 No. |
| 3. | Elite A1 | 1 No. |
| 4. | Reliance A1 | 1 No. |
| 5. | Craft Platen A3 | 1 No. |
| 6. | Heidle Burg A4 | 1 No. |
| 7. | Falcan A3 | 1 No. |
| | **Binding Machines** | |
| 8. | G. Grade and Sun Cutting Machine | 1 No. |
| 9. | Wire Stiching Machine | 1 No. |
| 10. | Palgraph Wire Stiching Machine | 1 No. |
| 11. | Pinto Graph Wire Stiching Machine | 1 No. |
| 12. | Russian Cutting Machine | 1 No. |

4 Assistant Director, Govt. Press, Madikeri. Date of auction on 12-10-2006, at 11-30 AM

| Sl.No. | Name of the Machine | No. Machines |
|---|---|---|
| 1 | 2 | 3 |
| 1. | Printing Division<br>Stap Cylinder Printing Machine A-1 size (Letter Press) | 1 No. |
| 2. | Express Cylinder Printing Machine A-2 size (Letter Press) | 1 No. |
| 3. | Cobald Machine A-4 size (Letter Press) | 1 No. |
| 4. | P.S.A.-3 A-2 size (Letter Press) | 1 No. |
| | **Binding Machines** | |
| 5. | Diamond Cutting Machine | 1 No. |
| 6. | Rolling Machine | 1 No. |
| 7. | Pintograph Cutting Machine | 1 No. |
| 8. | Pintograph Grainding Machine | 1 No. |
| 9. | Duro Switching Machine | 1 No. |

**Director**

## ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಪ್ರಕಟಣೆ ಸಂಖ್ಯೆ : ಸಕೇಮು, ಬೆಂ./ಪಿ 1904 / 2006-07, ದಿನಾಂಕ. 08ನೇ ಸೆಪ್ಟೆಂಬರ್ 2006**

**ವಿಷಯ:-** ಜಂಟಿ ನಿರ್ದೇಶಕರು ಸರ್ಕಾರಿ ಹೊರವಲಯ, ಮುದ್ರಣಾಲಯ, ಬೆಂಗಳೂರು, ಉಪನಿರ್ದೇಶಕರು ಸರ್ಕಾರಿ ವಿಭಾಗೀಯ ಮುದ್ರಣಾಲಯ, ಧಾರವಾಡ, ಗುಲ್ಬರ್ಗಾ ಹಾಗೂ ಸಹಾಯಕ ನಿರ್ದೇಶಕರು ಸರ್ಕಾರಿ ಶಾಖಾ ಮುದ್ರಣಾಲಯ, ಮಡಿಕೇರಿ ಈ ಕಛೇರಿಗಳಲ್ಲಿರುವ ಹಳೆಯ ನಿರುಪಯುಕ್ತ ಯಂತ್ರಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:-** ಸರ್ಕಾರಿ ಪತ್ರ ಕ್ರಮಾಂಕ ಇಡಿ : 41 : ಎಲ್‌ಪಿಪಿ : 2006, ಬೆಂಗಳೂರು, ದಿನಾಂಕ:16-05-2006.

ಈ ಕೆಳಗಿನ ಪಟ್ಟಿಯಲ್ಲಿ ವಿವರಿಸಲಾದ ಅನುಪಯುಕ್ತ ಮುದ್ರಣ ಮತ್ತು ಬೈಂಡಿಂಗ್ ಯಂತ್ರಗಳನ್ನು ಜಂಟಿ ನಿರ್ದೇಶಕರು ಸರ್ಕಾರಿ ಹೊರವಲಯ, ಮುದ್ರಣಾಲಯ, ಬೆಂಗಳೂರು, ಉಪನಿರ್ದೇಶಕರು ಸರ್ಕಾರಿ ವಿಭಾಗೀಯ ಮುದ್ರಣಾಲಯ, ಧಾರವಾಡ, ಗುಲ್ಬರ್ಗಾ ಹಾಗೂ ಸಹಾಯಕ ನಿರ್ದೇಶಕರು ಸರ್ಕಾರಿ ಶಾಖಾ ಮುದ್ರಣಾಲಯ, ಮಡಿಕೇರಿ, ಈ ಕಛೇರಿಗಳ ಆವರಣದಲ್ಲಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರು ಅಥವಾ ಅವರಿಂದ ಅಧಿಕಾರ ಪಡೆದ ಪ್ರತಿನಿಧಿಯಿಂದ ದಿನಾಂಕ 09-10-2006 ರಂದು ಬೆಳಿಗ್ಗೆ 11-30 ಗಂಟೆಗೆ ಜಂಟಿ ನಿರ್ದೇಶಕರು ಸರ್ಕಾರಿ ಹೊರವಲಯ, ಮುದ್ರಣಾಲಯ, ಬೆಂಗಳೂರು, ದಿನಾಂಕ 10-10-2006 ರಂದು ಸರ್ಕಾರಿ ಶಾಖಾ ಮುದ್ರಣಾಲಯ, ಧಾರವಾಡ, ದಿನಾಂಕ 11-10-2006 ರಂದು ಗುಲ್ಬರ್ಗಾ ಮತ್ತು ದಿನಾಂಕ 12-10-2006 ರಂದು ಮಡಿಕೇರಿ ಈ ಕಛೇರಿಗಳ ಆವರಣದಲ್ಲಿ ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಲಾಗುವುದೆಂಬುದಾಗಿ ಸಾರ್ವಜನಿಕರ ಅವಗಾಹನೆಗಾಗಿ ಈ ಮೂಲಕ ಅಧಿಸೂಚಿಸಲಾಗಿದೆ. ಅವಶ್ಯವಿದ್ದಲ್ಲಿ, ಹರಾಜನ್ನು ಮುಂದಿನ ಕೆಲಸದ ದಿನದಂದು ಕೂಡ ಮುಂದುವರಿಸಲಾಗುವುದು. ಪ್ರತಿಯೊಂದು ಯಂತ್ರವನ್ನು ಪ್ರತ್ಯೇಕವಾಗಿ ಹರಾಜು ಮಾಡಲಾಗುವುದು.

2. ಸಾಮಾನ್ಯವಾಗಿ ಹೆಚ್ಚಿನ ಕ್ರಯಕ್ಕೆ ಕೇಳುವವರು ಖರೀದಿದಾರನಾಗುತ್ತಾನೆ. ಆದರೆ ಈ ಇಲಾಖೆಯು ನಿಗದಿ ಪಡಿಸಿದ ಮೊತ್ತಕ್ಕೆ ಕ್ರಯ ಬಾರದಿದ್ದಲ್ಲಿ, ಯಂತ್ರದ ಹರಾಜನ್ನು ಅಂಗೀಕರಿಸಲಾಗುವುದಿಲ್ಲ. ವಿಜೇತ ಖರೀದಿದಾರನು ಕ್ರಯದ ಮೊತ್ತ ಹಾಗೂ ಮಾರಾಟ ತೆರಿಗೆಯನ್ನು ಪ್ರತ್ಯೇಕವಾಗಿ ನಗದಾಗಿ ಸಂದಾಯ ಮಾಡಬೇಕು. (ಯಾವುದೇ ಚೆಕ್ ಅಥವಾ ಬ್ಯಾಂಕ್ ಗ್ಯಾರಂಟಿಯನ್ನು ಅಂಗೀಕರಿಸುವುದಿಲ್ಲ). ಅಂತಿಮ ಖರೀದಿದಾರನು ಡೆಲಿವರಿ ತೆಗೆದುಕೊಳ್ಳುವಾಗ ಅಂದರೆ ಒಂದು ವಾರದೊಳಗೆ ಪೂರ್ಣ ಹಣವನ್ನು ಸಂದಾಯ ಮಾಡತಕ್ಕದು. ಅದಕ್ಕೆ ತಪ್ಪಿದಲ್ಲಿ ಆತನ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

3. ಪ್ರತಿಯೊಬ್ಬ ಖರೀದಿದಾರನು ತನ್ನ ಹೆಸರು ಮತ್ತು ಪೂರ್ಣ ವಿಳಾಸವನ್ನು ನೀಡಿ ಹರಾಜಿಗೆ ಮೊದಲು ಪ್ರತಿಯೊಬ್ಬ ಪ್ರತ್ಯೇಕ ಮುಂಗಡವಾಗಿ ಭದ್ರತಾ ಠೇವಣಿಯಾಗಿ ರೂ. 10,000/- (ಹತ್ತು ಸಾವಿರ ರೂಪಾಯಿಗಳು) ಮಾತ್ರ ಮೊತ್ತವನ್ನು ಜಂಟಿ ನಿರ್ದೇಶಕರು ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು, ಉಪ ನಿರ್ದೇಶಕರು, ಸರ್ಕಾರಿ ವಿಭಾಗೀಯ ಮುದ್ರಣಾಲಯ, ಧಾರವಾಡ, ಗುಲ್ಬರ್ಗಾ ಮತ್ತು ಸಹಾಯಕ ನಿರ್ದೇಶಕರು ಶಾಖಾ ಮುದ್ರಣಾಲಯ ಮಡಿಕೇರಿ ಇಲ್ಲಿ ನಗದು ರೂಪದಲ್ಲಿ ಸಂಬಂಧಿಸಿದ ಮುದ್ರಣಾಲಯದ ನಗದು ವಿಭಾಗದಲ್ಲಿ ಠೇವಣಿ ಇಡಬೇಕು. ಅವಿಜೇತ ಖರೀದಿದಾರರಿಗೆ ಹರಾಜು ಮುಗಿದ ಕೂಡಲೇ ಈ ಠೇವಣಿಯನ್ನು ಹಿಂತಿರುಗಿಸಲಾಗುವುದು. ಈ ಸಂಬಂಧದಲ್ಲಿ ಯಾವುದೇ ಚೆಕ್ ಅಂಗೀಕರಿಸುವುದಿಲ್ಲ. ಮುಂಗಡ ಹಣದ ಠೇವಣಿಗಳನ್ನು ಸಂಬಂಧಿಸಿದ ಕಛೇರಿಗಳ ನಗದು ವಿಭಾಗದಲ್ಲಿ ಹರಾಜು ಪ್ರಾರಂಭವಾಗುವುದಕ್ಕಿಂತ ಒಂದು ಗಂಟೆ ಮುಂಚಿತವಾಗಿ ನಗದು ವಿಭಾಗದಲ್ಲಿ ಪಾವತಿ ಮಾಡಿ ಸ್ವೀಕೃತಿ ಪಡೆದು ಹರಾಜಿನಲ್ಲಿ ಭಾಗವಹಿಸುವುದು. ಮುಂಗಡ ಹಣದ ಠೇವಣಿಯನ್ನು ಖರೀದಿ ಮೊತ್ತಕ್ಕೆ ಹೊಂದಾಣಿಕೆ ಮಾಡಲು ಖರೀದಿದಾರನು ಇಚ್ಛಿಸಿದಲ್ಲಿ ಹಾಗೆ ಮಾಡಲಾಗುವುದು. ಆದರೆ ಸಂಬಂಧಪಟ್ಟ ಖರೀದಿದಾರನು ಹೊಂದಾಣಿಕೆ ಮಾಡಿದ ನಂತರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗುವುದಿಲ್ಲ ಮತ್ತು ಅವರ ಯಾವುದೇ ಕರೆಯನ್ನು ಪರಿಗಣಿಸಲಾಗುವುದಿಲ್ಲ.

4. ಬಿಡ್‌ದಾರನು ಅವರ ಹೊಣೆಯಲ್ಲಿ ಒಂದು ವಾರದೊಳಗಾಗಿ ಯಂತ್ರಗಳನ್ನು ಕೊಂಡೊಯ್ಯಬೇಕು, ತಪ್ಪಿದಲ್ಲಿ ಮುಂಗಡ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

5. ಹರಾಜು ಕೂಗುವುದಕ್ಕೆ ಮೊದಲು ಪ್ರತಿಯೊಬ್ಬ ಖರೀದಿದಾರನು ಈ ಹರಾಜಿನ ಷರತ್ತುಗಳನ್ನು ತಿಳಿದುಕೊಂಡಿರುವುದು ಮತ್ತು ಅರ್ಥ ಮಾಡಿಕೊಂಡಿರುವುದು ಅವಶ್ಯವಾಗಿದೆ. ಷರತ್ತುಗಳನ್ನು ತಿಳಿದಿಲ್ಲವೆಂದು, ತಪ್ಪಾಗಿ ಅರ್ಥಮಾಡಿಕೊಂಡಿರುವ ಅಥವಾ ಅಜ್ಞಾನದ ವಾದವನ್ನು ಅಂಗೀಕರಿಸುವುದಿಲ್ಲ.

6. ಈ ಕೆಳಗೆ ಸಹಿ ಮಾಡಿರುವವರು, ಯಾವುದೇ ವ್ಯಕ್ತಿ ಅಥವಾ ವ್ಯಕ್ತಿಗಳ ಬಿಡ್ಡನ್ನು ಅದಕ್ಕೆ ಯಾವುದೇ ಕಾರಣ ಕೊಡದೆ ಒಪ್ಪಿಕೊಳ್ಳಬಹುದು ಅಥವಾ ನಿರಾಕರಿಸಬಹುದು. ಈ ವಿಚಾರದಲ್ಲಿ ಈ ಇಲಾಖೆಯ ಜಂಟಿ, /ಉಪ / ಸಹಾಯಕ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ.

7. ಯಾವುದೇ ಐಟಂನ್ನು ಹರಾಜಿಗೆ ಇಡದಿದ್ದ ಸಂದರ್ಭದಲ್ಲಿ ಅದನ್ನು ಹರಾಜು ಪ್ರಾರಂಭವಾಗುವ ಮೊದಲು ಸಂಬಂಧಿಸಿದ ಕಛೇರಿಗಳ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು.

8. ಹರಾಜಿನಲ್ಲಿ ಕ್ರಯಗಳನ್ನು ರೂ. 100-00 (ಒಂದು ನೂರು ರೂಪಾಯಿಗಳು) ಏರಿಕೆ ಕ್ರಮದಲ್ಲಿ ಕೂಗಬೇಕು.

9. ಯಂತ್ರಗಳನ್ನು ಅನುಸೂಚಿಯಲ್ಲಿ ಅಧಿಸೂಚಿಸಿರುವ ಕ್ರಮದಲ್ಲಿ ಅಥವಾ ಹರಾಜನ್ನು ನಡೆಸುವ ಅಧಿಕಾರಿಯ ಇಚ್ಛಾನುಸಾರ ಹರಾಜಿಗೆ ಇಡಲಾಗುವುದು. ಯಾವುದೇ ಬಾಬ್ತಿಗೆ ಕ್ರಯ ಕೂಗಿ ಉಚ್ಚತಮ ಬಿಡ್ ಮೊತ್ತವನ್ನು ತಲುಪಿ ಮತ್ತು ಆ ಬಾಬತ್ತಿನ ಬಗ್ಗೆ ದೃಢವಾಗಿ ಘೋಷಿಸಿದಾಗ ಪ್ರತಿಯೊಂದು ಬಾಬ್ತಿನ ಉಚ್ಚತಮ ಬಿಡ್‌ದಾರನು ಬಿಡ್ ಮುಗಿದ ಕೂಡಲೇ ಆ ಬಿಡ್ ಕೂಗಿದುದರ ಸಂಕೇತವಾಗಿ ಬಿಡ್ ವಿವರ ಪತ್ರದಲ್ಲಿ ತನ್ನ ಹೆಸರನ್ನು ಬರೆದು ಸಹಿ ಮಾಡಬೇಕು.

10. ಯಾವುದೇ ವಿವಾದ ಉಂಟಾದಲ್ಲಿ ಹರಾಜಿಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಸಂಬಂಧಿಸಿದ ಕಛೇರಿಯ ಅಧಿಕಾರಿಗಳ ನಿರ್ಣಯವೇ ಅಂತಿಮವಾಗಿರತಕ್ಕದ್ದು ಮತ್ತು ಕಾನೂನು ಪ್ರಕಾರ ಬದ್ಧರಾಗಿರತಕ್ಕದ್ದು. ಹರಾಜಿಗೆ ಉದ್ದೇಶಿಸಲಾಗಿರುವ ಯಂತ್ರಗಳನ್ನು ಹರಾಜು ಪ್ರಾರಂಭವಾಗುವುದಕ್ಕೆ ಒಂದು ವಾರ ಮುಂಚಿತವಾಗಿ ಪರಿವೀಕ್ಷಣೆಗಾಗಿ ಒದಗಿಸಲಾಗುವುದು.

11. ಯಾವುದೇ ಹೆಚ್ಚಿನ ವಿವರಗಳನ್ನು ಜಂಟಿ ನಿರ್ದೇಶಕರು, ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು ಹಾಗೂ ಉಪ/ ಸಹಾಯಕ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಧಾರವಾಡ, ಗುಲ್ಬರ್ಗಾ ಮತ್ತು ಮಡಿಕೇರಿ ಇವರ ಕಛೇರಿಯಿಂದ ಕೆಲಸದ ದಿನಗಳಂದು ಕಛೇರಿಯ ವೇಳೆಯಲ್ಲಿ ಖುದ್ದಾಗಿ ಪಡೆಯಬಹುದು.

12. ಟೆಂಡರ್‌ದಾರರು ರೂ. 10,000-00 ಇಎಂಡಿ ಯನ್ನೊಳಗೊಂಡ ಪ್ರತಿ ಯಂತ್ರಕ್ಕೆ ಪ್ರತ್ಯೇಕ ದರ ನೀಡಿರುವ ಮೊಹರಾದ ಟೆಂಡರ್‌ನ್ನು ನಿಗದಿ ಪಡಿಸಿದ ದಿನಾಂಕದಂದು ಬೆಳಿಗ್ಗೆ 11-30 ಗಂಟೆಯೊಳಗಾಗಿ ಸಂಬಂಧಿಸಿದ ಕಚೇರಿಗೆ ತಲುಪುವಂತೆ ಸಲ್ಲಿಸಬೇಕು. ನಿಗದಿಪಡಿಸಿದ ದಿನಾಂಕದ ನಂತರ ಸಲ್ಲಿಸಲಾದ ಟೆಂಡರ್‌ಗಳನ್ನು ಮತ್ತು ಇಎಂಡಿ ಇಲ್ಲದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ. ಮೊಹರಾದ ಟೆಂಡರ್‌ನ್ನು ಸಲ್ಲಿಸಿದಲ್ಲಿ ಈ ಟೆಂಡರ್‌ನ್ನು ಯಂತ್ರಗಳ ಹರಾಜು ಮುಗಿದ ನಂತರ ತೆರೆಯಲಾಗುವುದು. ಅಲ್ಲದೆ ಸದರಿ ಟೆಂಡರ್‌ದಾರರು ಇಎಂಡಿ ನೀಡಿರುವ ಬಗ್ಗೆ ಹರಾಜು ಪ್ರಾಧಿಕಾರಿಗಳಲ್ಲಿ ದಾಖಲಾತಿ ತೋರಿಸಿ ಬಹಿರಂಗ ಹರಾಜಿನಲ್ಲಿ ಸಹ ಭಾಗಿಯಾಗಬಹುದಾಗಿದೆ. ಅದಾಗ್ಯೂ ಬಹಿರಂಗ ಹರಾಜು ದರ ಅಥವಾ ಟೆಂಡರ್ ದರ ಯಾವುದು ಹೆಚ್ಚೋ ಆ ದರವನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

13. ಮುಂದುವರಿದು ಮೇಲ್ಕಂಡ ವಿಷಯದ ಬಗ್ಗೆ ಟೆಂಡರ್ ಕಂ ಬಹಿರಂಗ ಹರಾಜಿನ ದರಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕು ಸಂಬಂಧಿಸಿದ ಕಛೇರಿಯ ಜಂಟಿ / ಉಪ / ಸಹಾಯಕ ನಿರ್ದೇಶಕರದಾಗಿರುತ್ತದೆ. ಈ ವಿಚಾರದಲ್ಲಿ ಉಂಟಾಗುವ ಎಲ್ಲಾ ವಿವಾದಗಳಲ್ಲಿ ಸಂಬಂಧಿಸಿದ ಜಂಟಿ / ಉಪ / ಸಹಾಯಕ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ.

14. 1. ಜಂಟಿ ನಿರ್ದೇಶಕರು, ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು.-ಹರಾಜಿನ ದಿನಾಂಕ: 09-10-06

| ಕ್ರಮ ಸಂಖ್ಯೆ | ಹರಾಜಿಗೆ ಸಿದ್ಧವಿರುವ ಯಂತ್ರಗಳು | ಯಂತ್ರದ ಸಂಖ್ಯೆ |
|---|---|---|
| 1. | ಆಟೋ ಫಿಲಂ ಪ್ರೋಸಸರ್ | 1 ಸಂಖ್ಯೆ |
| 2. | ವರ್ಲ್ಡರ್ Whirler | 1 ಸಂಖ್ಯೆ |
| 3. | ವೆಬ್ ಆಪ್‌ಸೆಟ್ ಮಿಷನ್ | 1 ಸಂಖ್ಯೆ |
| 4. | ಪ್ರಿಂಟಿಂಗ್ ಡೌನ್ ಫ್ರೇಂ | 1 ಸಂಖ್ಯೆ |
| 5. | ರೀಲ್ ಕಟಿಂಗ್ ಮಿಷನ್ | 1 ಸಂಖ್ಯೆ |
| 6. | ಆರ್ಕೈ ಲ್ಯಾಂಪ್ಸ್ | 1 ಸಂಖ್ಯೆ |

2. ಉಪ ನಿರ್ದೇಶಕರು, ಸರ್ಕಾರಿ ವಿಭಾಗೀಯ ಮುದ್ರಣಾಲಯ, ಧಾರವಾಡ.- ಹರಾಜಿನ ದಿನಾಂಕ 10-10-2006

| ಕ್ರಮ ಸಂಖ್ಯೆ | ಹರಾಜಿಗೆ ಸಿದ್ಧವಿರುವ ಯಂತ್ರಗಳು | ಯಂತ್ರದ ಸಂಖ್ಯೆ |
|---|---|---|
| 1. | ಮೋನೋ ಕೀ ಬೋರ್ಡ್ ಹಾಗೂ ಕ್ಯಾಸ್ಟರ್ ಯಂತ್ರ | 1 ಸೆಟ್ |
| 2. | ಲೈನೋ ಯಂತ್ರ | 1 ಸೆಟ್ |
| 3. | ಮೆಟಲ್ ಮೆಲ್ಟಿಂಗ್ ಪನರಸ | 1 ಸಂಖ್ಯೆ |
| 4. | ವಿಕ್ಟೋರಿಯಾ ಪ್ಲಾಟ್ ಎ 1 ಸೈಜ್, ಯಂತ್ರದ ಸಂಖ್ಯೆ 1 ಮತ್ತು 2 | 2 ಸಂಖ್ಯೆ |
| 5. | ಮಹಾಬೀರ ಯಂತ್ರ ಎ1 ಸೈಜ್ ಯಂತ್ರ ಸಂಖ್ಯೆ 3 ಮತ್ತು 4 | 2 ಸಂಖ್ಯೆ |
| 6. | ಪಿ.ಎಸ್.ಎ-3 ಮುದ್ರಣ ಯಂತ್ರ ಸಂಖ್ಯೆ 16 ಮತ್ತು 17 ಎ2 ಸೈಜ್ | 2 ಸಂಖ್ಯೆ |
| 7. | ಬ್ರಹ್ಮನರ ಸಿಲೆಂಡರ್ ಎ3 ಸೈಜ್ ಯಂತ್ರ ಸಂಖ್ಯೆ 13 | 1 ಸಂಖ್ಯೆ |

3. ಉಪ ನಿರ್ದೇಶಕರು, ಸರ್ಕಾರಿ ವಿಭಾಗೀಯ ಮುದ್ರಣಾಲಯ, ಗುಲ್ಬರ್ಗಾ. ಹರಾಜಿನ ದಿನಾಂಕ 11-10-2006

| ಕ್ರಮ ಸಂಖ್ಯೆ | ಹರಾಜಿಗೆ ಸಿದ್ಧವಿರುವ ಯಂತ್ರಗಳು | ಯಂತ್ರದ ಸಂಖ್ಯೆ |
|---|---|---|
| 1. | ವಾರ್ ಪೆಡಲ್ | 1 ಸಂಖ್ಯೆ |
| 2. | ಬ್ರಹ್ಮನರ | 1 ಸಂಖ್ಯೆ |
| 3. | ಇಲೈಟ್ ಎ1 | 1 ಸಂಖ್ಯೆ |
| 4. | ರಿಲೈನ್ಸ್ ಎ 1 | 1 ಸಂಖ್ಯೆ |
| 5. | ಕ್ರಾಫ್ಟ್ ಪ್ಲೆಟನ್ ಎ3 | 1 ಸಂಖ್ಯೆ |
| 6. | ಐಡಲ್ ಬರ್ಗ್ ಎ4 | 1 ಸಂಖ್ಯೆ |
| 7. | ಫಾಲಕನ್ ಎ3 | 1 ಸಂಖ್ಯೆ |

**ಬೈಂಡಿಂಗ್ ಯಂತ್ರಗಳು**

| | | |
|---|---|---|
| 8. | ಜಿ. ಗ್ರೇಡ್ ಅಂಡ್ ಸನ್ ಕಟಿಂಗ್ ಯಂತ್ರ | 1 ಸಂಖ್ಯೆ |
| 9. | ವೈರ್ ಸ್ಟಿಚ್ಚಿಂಗ್ ಮೆಷಿನ್ | 1 ಸಂಖ್ಯೆ |
| 10. | ಪಾಲಗ್ರಾಫ್ ವೈರ್ ಸ್ಟಿಚ್ಚಿಂಗ್ ಯಂತ್ರ | 1 ಸಂಖ್ಯೆ |
| 11. | ಪಿಂಟೋ ಗ್ರಾಫ್ ವೈರ್ ಸ್ಟಿಚ್ಚಿಂಗ್ ಯಂತ್ರ | 1 ಸಂಖ್ಯೆ |
| 12. | ರಷ್ಯನ್ ಕಟಿಂಗ್ ಮೆಷಿನ್ | 1 ಸಂಖ್ಯೆ |

4. ಸಹಾಯಕ ನಿರ್ದೇಶಕರು, ಸರ್ಕಾರಿ ಜಿಲ್ಲಾ ಮುದ್ರಣಾಲಯ, ಮಡಿಕೇರಿ. ಹರಾಜಿನ ದಿನಾಂಕ 12-10-2006

| ಕ್ರಮ ಸಂಖ್ಯೆ | ಹರಾಜಿಗೆ ಸಿದ್ಧವಿರುವ ಯಂತ್ರಗಳು | ಯಂತ್ರ ಸಂಖ್ಯೆ |
|---|---|---|
| 1. | ಮುದ್ರಣ ವಿಭಾಗ<br>ಸ್ಟಾಪ್ ಸಿಲೆಂಡರ್ ಮುದ್ರಣ ಯಂತ್ರ ಎ-1 (ಲೆಟರ್ ಪ್ರೆಸ್) | 1 ಸಂಖ್ಯೆ |
| 2. | ಎಕ್ಸ್‌ಪ್ರೆಸ್ ಸಿಲೆಂಡರ್ ಮುದ್ರಣ ಯಂತ್ರ ಎ-2 (ಲೆಟರ್ ಪ್ರೆಸ್) | 1 ಸಂಖ್ಯೆ |
| 3. | ಕೋಬಾಲ್ಡ್ ಮೆಷಿನ್ ಎ-4 ಸೈಜ್ (ಲೆಟರ್ ಪ್ರೆಸ್) | 1 ಸಂಖ್ಯೆ |
| 4. | ಪಿಎಸ್‌ಎ-3 ಎ-2 ಸೈಜ್ (ಲೆಟರ್ ಪ್ರೆಸ್) | 1 ಸಂಖ್ಯೆ |

**ಬೈಂಡಿಂಗ್ ವಿಭಾಗ**

| | | |
|---|---|---|
| 5. | ಡೈಮಂಡ್ ಕಟಿಂಗ್ ಮೆಷಿನ್ | 1 ಸಂಖ್ಯೆ |
| 6. | ರೋಲಿಂಗ್ ಮೆಷಿನ್ | 1 ಸಂಖ್ಯೆ |
| 7. | ಪಿಂಟೋ ಗ್ರಾಫ್ ಕಟಿಂಗ್ ಮೆಷಿನ್ | 1 ಸಂಖ್ಯೆ |
| 8. | ಪಿಂಟೋ ಗ್ರಾಫ್ ಗ್ರೈಂಡಿಂಗ್ ಮೆಷಿನ್ | 1 ಸಂಖ್ಯೆ |
| 9. | ಡ್ಯೂರೋ ಸ್ಟಿಚ್ ಸ್ಕಿಚಿಂಗ್ ಮೆಷಿನ್ | 1 ಸಂಖ್ಯೆ |

ಪಿ.ಆರ್. 559 **ನಿರ್ದೇಶಕರು**

**ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿಗಳು)**

**ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ**

**ಅಲ್ಪಾವಧಿ ಟೆಂಡರ್ ಅಧಿಸೂಚನೆ**

**(ದ್ವಿ ಲಕೋಟೆ ಪದ್ಧತಿ)**

**ಸಂ: ಹೆಆಕಾನಿಇಂ : ರಾಹೆವಿ : ಕಾ : ಎಇ : ಎನ್‌ಐಟಿ : ಪಿಆರ್ : 2006-07 : 735, ದಿನಾಂಕ: 24ನೇ ಆಗಸ್ಟ್ 2006**

ಈ ಮುಂದೆ ತಿಳಿಸಿರುವ ಕಾಮಗಾರಿಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000ರಂತೆ ಮೊಹರು ಮಾಡಿದ ಬಾಬ್ತುವಾರು ಟೆಂಡರುಗಳನ್ನು ನಿಗದಿಪಡಿಸಿರುವ ಸ್ವರೂಪದ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ 1ನೇ ದರ್ಜೆ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ದರ ಸಲ್ಲಿಕೆಯ ವ್ಯವಸ್ಥೆಯಲ್ಲಿ 'ತಾಂತ್ರಿಕ ಬಿಡ್' ಮತ್ತು 'ಆರ್ಥಿಕ ಬಿಡ್' ಇರುತ್ತದೆ. ದರಗಳನ್ನು ಎರಡು ಭಾಗಗಳಲ್ಲಿ ಎರಡು ಪ್ರತ್ಯೇಕ ಮೊಹರು ಮಾಡಿರುವ ಲಕೋಟೆಗಳಲ್ಲಿ 'ತಾಂತ್ರಿಕ ಬಿಡ್' ಮತ್ತು 'ಆರ್ಥಿಕ ಬಿಡ್' ಎಂದು ಗುರುತು ಮಾಡಿರುವುದನ್ನು ಸ್ವೀಕರಿಸಲಾಗುವುದು. ಈ ಎರಡೂ ಲಕೋಟೆಗಳನ್ನು ಮತ್ತೊಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿ ಕಾಮಗಾರಿಯ ಹೆಸರು ಮೇಲ್ಬರಹವಾಗಿ ಬರೆದು ಈ ಕೆಳಗೆ ಸಹಿ ಮಾಡಿರುವವರ ವಿಳಾಸಕ್ಕೆ ಬರೆಯಬೇಕು, ಮತ್ತು ಬಿಡ್ಡುದಾರರ ಹೆಸರು ಮತ್ತು ಪೂರ್ಣ ಅಂಚೆ ವಿಳಾಸವನ್ನು ಬರೆದಿರಬೇಕು. ಪೂರ್ಣಗೊಳಿಸಿದ ಟೆಂಡರ್ ಸಲ್ಲಿಕೆಯನ್ನು ಅಧೀಕ್ಷಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವೃತ್ತ, ಧಾರವಾಡ ಇವರ ಕಚೇರಿಯಲ್ಲಿ ಅಥವಾ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಕಛೇರಿಯಲ್ಲಿ ಈ ಕೆಳಗೆ ಸಹಿ ಮಾಡಿರುವವರು ದಿನಾಂಕ: 19.09.2006ರ ಅಪರಾಹ್ನ 4.00 ಗಂಟೆ (ಐಎಸ್‌ಟಿ) ವರೆಗೆ ಸ್ವೀಕರಿಸುವರು. ಇದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ರಂತೆ ಮತ್ತು ಕರ್ನಾಟಕ ಲೋಕೋಪಯೋಗಿ ಇಲಾಖೆ ಕಾಯಿದೆ ಸಂಪುಟ 11ರ ಪಿಡಬ್ಲ್ಯೂಜಿ-65 ಮತ್ತು 66 ರಲ್ಲಿ ಗೊತ್ತುಪಡಿಸಿರುವ ನಿಯಮಗಳಿಗೆ ಒಳಪಟ್ಟಿರುತ್ತದೆ. ತಾಂತ್ರಿಕ ಬಿಡ್‌ನ್ನು ಈ ಕೆಳಗೆ ಸಹಿ ಮಾಡಿರುವವರು ಕೆಳಗೆ ನಮೂದಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಕಛೇರಿಯಲ್ಲಿ ತೆರೆಯುವರು. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದವರ ಆರ್ಥಿಕ ಬಿಡ್ಡ್‌ನ್ನು ಮಾತ್ರ ತೆರೆಯಲಾಗುವುದು. ಮುಂದೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವತ್ರಿಕ ರಜಾ ದಿನವಾದರೆ ಮುಂದಿನ ಅನುಕೂಲಕರ ದಿನವನ್ನು ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಡಲಾದ ಮೊತ್ತ ರೂಪಾಯಿಗಳಲ್ಲಿ | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ ತೆರಿಗೆಗಳು ಸೇರಿದಂತೆ ರೂ.ಗಳಲ್ಲಿ (ಹಿಂದಿರುಗಿಸ ಲಾಗುವುದಿಲ್ಲ) | ಕಾಮಗಾರಿಯ ಸ್ವರೂಪ | ಕಾಮಗಾರಿಗೆ ನಿಗಧಿ ಪಡಿಸಲಾದ ಕಾಲಮಿತಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1) | ರಾಹೆ-17 ರ ಪಣಜಿ - ಮಂಗಳೂರು ರಸ್ತೆಯ ಕಿ.ಮೀ. 93.70 ರಿಂದ 108.00 ರವರೆಗೆ ನಿಯತಕಾಲಿಕ ನವೀಕರಣ ಕಾಮಗಾರಿ | 2,10,00,000-00 | 2,10,000-00 | 20,000/- + 12.5% VAT | ಡಾಂಬರೀಕರಣ | 4 ತಿಂಗಳು |
| 2) | ರಾಹೆ-17ರ ಪಣಜಿ - ಮಂಗಳೂರು ರಸ್ತೆಯ ಕಿ.ಮೀ. 227.00 ರಿಂದ 241.00 ರವರೆಗೆ ನಿಯತಕಾಲಿಕ ನವೀಕರಣ ಕಾಮಗಾರಿ | 1,92,00,000-00 | 1,92,000-00 | 20,000/ - 12.5% VAT | ಡಾಂಬರೀಕರಣ | 4 ತಿಂಗಳು |

**ಷರತ್ತುಗಳು :**

1. ಕಾಮಗಾರಿಗೆ ಸಲ್ಲಿಸಲು ಆಪೇಕ್ಷಿಸುವ ಗುತ್ತಿಗೆದಾರರು ಟೆಂಡರ್ ಪತ್ರದ ಬೆಲೆಯನ್ನು ನಗದಾಗಿ ಅಥವಾ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಪರವಾಗಿ ಪಡೆದು ಕಾರವಾರದಲ್ಲಿ ಪಾವತಿಯಾಗುವ ನಗದಾಗಿ ಅಥವಾ ಡಿ.ಡಿ. ಸ್ವರೂಪದಲ್ಲಿ ಸಲ್ಲಿಸಿ ಅರ್ಜಿಯೊಂದಿಗೆ ಕೆಳಗೆ ಸಹಿ ಮಾಡಿದವರ ಕಛೇರಿಯಲ್ಲಿ ಸಲ್ಲಿಸಬೇಕು. ಅರ್ಜಿಯನ್ನು ಸಲ್ಲಿಸುವಾಗ ಅರ್ಜಿಯ ಜೊತೆಗೆ ನೊಂದಣಿ ಸಾಕ್ಷಾದಾರ ಇತ್ತೀಚಿನವರೆಗೆ ಆದಾಯ ತೆರಿಗೆಯಿಂದ ಮುಕ್ತವಾಗಿರುವ ಯೋಗ್ಯತಾ ಪತ್ರ ಮತ್ತು ಇದೇ ಸ್ವರೂಪದ ಕಾಮಗಾರಿ ನಿರ್ವಹಿಸಿರುವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಅರ್ಜಿದಾರರು ಸಲ್ಲಿಸಬೇಕು. ಹಾಗೆ ಮಾಡದೇ ಇದ್ದಲ್ಲಿ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. ಅರ್ಹತಾ ಪತ್ರವನ್ನು ಕಾರ್ಯನಿರ್ವಾಹಕ ಇಂಜಿನೀಯರರ ಹುದ್ದೆಯ ತತ್ಸಮ ದರ್ಜೆಯ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದಿರಬೇಕು.

2. ಟೆಂಡರ್‌ಗೆ ಅರ್ಜಿ ಸಲ್ಲಿಸಲು ಖಾಲಿ ಟೆಂಡರ್ ಫಾರಂಗಳನ್ನು ಪಡೆಯಲು ಹಾಗೂ ಮೊಹರಾದ ಟೆಂಡರ್‌ಗಳನ್ನು ಪಡೆಯುವ ದಿನಾಂಕಗಳು ಈ ಕೆಳಕಂಡಂತಿವೆ :

1) ಖಾಲಿ ಟೆಂಡರ್ ಫಾರಂಗಳನ್ನು ಪಡೆಯುವುದಕ್ಕೆ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ : 18.09.2006

2) ಮೊಹರಾದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ: ಸಂಜೆ 4.00 ಗಂಟೆಯವರೆಗೆ : 19.09.2006

3) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ ಬೆಳಿಗ್ಗೆ 11.00 ಗಂಟೆಗೆ : 20.09.2006

**ತಾಂತ್ರಿಕ ಬಿಡ್ಡಿನ ಷರತ್ತುಗಳು :**

1. ಇ.ಎಂ.ಡಿ. ಯನ್ನು ಎಫ್.ಡಿ.ಆರ್.:ಡಿ.ಡಿ.: ಬ್ಯಾಂಕರ್ಸ್ ಚೆಕ್ (ಬ್ಯಾಂಕ್ ಗ್ಯಾರಂಟಿ ಸ್ವರೂಪದಲ್ಲಿ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದು ಅಥವಾ ಎನ್.ಎಸ್.ಸಿ. ಆಗಿ ಪಡೆದು ಈ ಕೆಳಗೆ ರುಜು ಮಾಡಿರುವವರ ಪರವಾಗಿ ಒತ್ತೆಯಿಟ್ಟು) ಟೆಕ್ನಿಕಲ್ ಬಿಡ್ಡಿಗೆ ಲಗತ್ತಿಸಬೇಕು. ಬ್ಯಾಂಕ್ ಗ್ಯಾರಂಟಿಯು ಟೆಂಡರ್ ಜೊತೆಗೆ ಕೊಟ್ಟಿರುವ ಪಿಡಬ್ಲ್ಯೂಜಿ-66ರಲ್ಲಿ ಗೊತ್ತುಪಡಿಸಿರುವಂತೆ ಇರಬೇಕು. ವ್ಯತಿರಿಕ್ತವಾದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು. ಇ.ಎಂ.ಡಿ.ಯ ಸಿಂಧುತ್ವ ಟೆಂಡರ್ ನಿಬಂಧನೆಗಳು ಇತ್ಯಾದಿಗಳಿಗೆ ಸಂಬಂಧಿಸಿದಂತೆ ಪಿಡಬ್ಲ್ಯೂಜಿ-66 ನ್ನು ಅನುಸರಿಸಬೇಕು. ಮತ್ತು ಅವುಗಳು ಟೆಂಡರ್‌ದಾರರನ್ನು ಬದ್ಧರನ್ನಾಗಿ ಮಾಡುತ್ತದೆ. ಎಲ್ಲಾ ತರಹದ ಇ.ಎಂ.ಡಿ.ಯ ಕಾಲಾವಧಿಯು ಟೆಂಡರ್ ತೆರೆದ ದಿನಾಂಕದಿಂದ 180 ದಿನಗಳಿಗಿರತಕ್ಕದ್ದು. ತಪ್ಪಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

2. ಕೆಳಗೆ ನಮೂದಿಸಿದ ಕಾಮಗಾರಿಗಳಿಗೆ ನ್ಯೂನತೆಗಳನ್ನು ದುರಸ್ಥಿಪಡಿಸುವ ಅವಧಿಯು ಕಾಮಗಾರಿ ಪೂರ್ಣಗೊಂಡ ದಿನಾಂಕದಿಂದ ಒಂದು ವರ್ಷದವರೆಗೆ ಇರುತ್ತದೆ. ಈ ಅವಧಿಯಲ್ಲಿ ಕೈಗೊಂಡ ಕಾಮಗಾರಿಯಲ್ಲಿ ಯಾವುದೇ ನ್ಯೂನ್ಯತೆಗಳು ಕಂಡು ಬಂದಲ್ಲಿ ಅವುಗಳನ್ನು ಗುತ್ತಿಗೆದಾರರೇ ಅವರ ಸ್ವಂತ ಖರ್ಚಿನಲ್ಲಿ ದುರಸ್ಥಿಪಡಿಸತಕ್ಕದ್ದು. ಈ ಸಂಬಂಧದಲ್ಲಿ ಅವಶ್ಯವಿರುವ ಇ.ಎಂ.ಡಿ.:ಎಸ್.ಡಿ.ಯನ್ನು ಒದಗಿಸತಕ್ಕದ್ದು.

3. ಪ್ರತಿಯೊಬ್ಬ ಟೆಂಡರುದಾರರು ಈ ಮುಂದೆ ತಿಳಿಸಿರುವ ಯಂತ್ರೋಪಕರಣಗಳನ್ನು ಸ್ವಂತ ಹೊಂದಿರಬೇಕು ಮತ್ತು ಅದರ ಮಾಲೀಕತ್ವದ ಬಗ್ಗೆ ಸಾಕ್ಷಾಧಾರಗಳನ್ನು ಈ ಮುಂದೆ ತಿಳಿಸಿರುವಂತೆ ಒದಗಿಸತಕ್ಕದ್ದು.

4. ತಾಂತ್ರಿಕ ಬಿಡ್ ಟೆಂಡರನ್ನು ತೆರೆಯುವ ಸಮಯದಲ್ಲಿ ಯಂತ್ರೋಪಕರಣಗಳ ಹಾಗೂ ಕಾಮಗಾರಿ ಮಾಡಿರುವ ಬಗ್ಗೆ ಪ್ರಮಾಣ ಪತ್ರದ ಮೂಲ ಪ್ರತಿಗಳನ್ನು ಒದಗಿಸತಕ್ಕದ್ದು. ಇಲ್ಲದಿದ್ದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆ | ಮಾಲೀಕತ್ವದ ಬಗ್ಗೆ |
|---|---|---|---|
| 1 | 2 | 3 | 4 |
| 1) | ಹಾಟ್ ಮಿಕ್ಸ್ ಪ್ಲಾಂಟ್ 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯವಿರುವ (ಎಂ.ಓ.ಆರ್.ಟಿ. ಮತ್ತು ಹೆಚ್. ವಿವರಗಳ ಪ್ರಕಾರ) | 1 No. | ಖರೀದಿಸಿದ ದಾಖಲೆ : ಸೇಲ್ ಡೀಡ್ ಮತ್ತು ಡೀಡ್ ಮಾಡಲಾದ ಮೊದಲಿನ ಖರೀದಿಸಿದ ದಾಖಲೆ |
| 2) | ಪೇವರ್ ಫಿನಿಷರ್ | 1 No. | - ಸದರ - |
| 3) | ಸ್ಟಾಟಿಕ್ ರೋಡ್ ರೋಲರ್ಸ್ | 3 Nos. | - ಸದರ - |
| 4) | ವೈಬ್ರೆಟರಿ ರೋಲರ್ | 1 No. | - ಸದರ - |
| 5) | ಮೆಕ್ಯಾನಿಕಲ್ ಸ್ಪ್ರೇಯರ್ಸ್ | 2 Nos. | - ಸದರ - |
| 6) | ಟಿಪ್ಪರ್ಸ್ | 4 Nos. | ಆರ್.ಟಿ.ಓ. ಕಛೇರಿಯ ನೋಂದಣಿ ಪ್ರಮಾಣ ಪತ್ರದ ದಾಖಲೆ |
| 7) | ಜನರೇಟರ್ | 1 | ಖರೀದಿಸಿದ ದಾಖಲೆ : ಸೇಲ್ ಡೀಡ್ ಮತ್ತು ಡೀಡ್ ಮಾಡಲಾದ ಮೊದಲಿನ ಖರೀದಿಸಿದ ದಾಖಲೆ |
| 8) | ಗುಣ ನಿಯಂತ್ರಣ ಸಲಕರಣೆ ಅಂದರೆ ಸೀವ್ಸ್, ಬಿಟುಮನ್ ಅಕ್ಸಟ್ರಕ್ಟರ್, ತೂಕದ ಯಂತ್ರ ಹಾಗೂ ತಾಂತ್ರಿಕ ಸಿಬ್ಬಂದಿ ಸಹಿತ ಲ್ಯಾಬೋರೇಟರಿ | 1 ಯುನಿಟ್ | --- |

5. ಕಳೆದ ಐದು ವರ್ಷಗಳ ಅವಧಿಯಲ್ಲಿ ಟೆಂಡರಿಗೆ ಹಾಕಿರುವ ಮೊಬಲಗಿನ ಶೇ 30 ರಷ್ಟು ಮೌಲ್ಯದ ಇದೇ ರೀತಿಯ ಕಾಮಗಾರಿಯನ್ನು ಪ್ರತಿ ಟೆಂಡರುದಾರರು ತೃಪ್ತಿಕರವಾಗಿ ಪೂರ್ಣಗೊಳಿಸಿರಬೇಕು. (ತಹಲ್‌ವರೆಗೆ ವಾರ್ಷಿಕ ಶೇ. 10 ಲೆಕ್ಕಾಚಾರ ಮಾಡಬಹುದಾಗಿದೆ). ಪರ್ಯಾಯವಾಗಿ ಸದರಿ ವಾರ್ಷಿಕ ಸಾಲಿನಲ್ಲಿ ಇದೇ ತರಹ ಕಾಮಗಾರಿಗೆ ಶೇ. 30 ರಷ್ಟು ಬಿಲ್ಲು ಪಾವತಿ ಆಗಿರುವ ಬಗ್ಗೆ ತಾಂತ್ರಿಕ ಬಿಡ್‌ನಲ್ಲಿ ಸಲ್ಲಿಸಬೇಕು. ಅರ್ಹತಾ ಪತ್ರವನ್ನು ಕಾರ್ಯನಿರ್ವಾಹಕ ಇಂಜಿನೀಯರರ ಹುದ್ದೆಗೆ ಕಡಿಮೆ ಇರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದಿರಬೇಕು.

6. ಆರ್ಥಿಕ ಸಾಮರ್ಥ್ಯದ ಬಗ್ಗೆ ಟೆಂಡರ್‌ಗೆ ಹಾಕಿರುವ ಮೊಬಲಗಿನ ಶೇ. 30 ರಷ್ಟು ಸಮವಾಗಿರುವ ಮೊತ್ತದ ಲೈನ್ ಆಫ್ ಕ್ರೇಡಿಟ್‌ನ್ನು ಯಾವುದೇ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ನಿಗಧಿತ ನಮೂನೆಯಲ್ಲಿ ಪಡೆದು ಸಲ್ಲಿಸಬೇಕು. ಈ ಪ್ರಮಾಣ ಪತ್ರವನ್ನು ಸಲ್ಲಿಸದಿದ್ದಲ್ಲಿ ಟೆಂಡರ್ ತಿರಸ್ಕರಿಸಲ್ಪಡುವುದು.

7. ತಾಂತ್ರಿಕ ಬಿಡ್‌ಗೆ ಒತ್ತಾಸೆಯಾಗಿ ಲಗತ್ತಿಸುವ ಎಲ್ಲಾ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಗಳಿಂದ (ಅಂದರೆ ಕಾರ್ಯನಿರ್ವಾಹಕ ಇಂಜಿನೀಯರರ ದರ್ಜೆಗಿಂತ ಕಡಿಮೆ ಇರದ ಅಧಿಕಾರಿಗಳಿಂದ ದೃಢೀಕರಿಸಬೇಕು. ಟೆಕ್ನಿಕಲ್ ಬಿಡ್ಡನ್ನು ತೆರೆಯುವ ದಿನಾಂಕದಂದು ಮೂಲ ಪ್ರತಿಗಳನ್ನು ಪರಿಶೀಲಿಸಲು ಹಾಜರು ಪಡಿಸಬೇಕು. ಮೂಲ ಪ್ರತಿಗಳನ್ನು ಒದಗಿಸದೇ ಇದ್ದ ಪಕ್ಷದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

8. ತಾಂತ್ರಿಕ ಬಿಡ್ಡಿನಲ್ಲಿ ಸಂಬಂಧಪಟ್ಟ ದಾಖಲೆಗಳನ್ನು ಮಾತ್ರ ಲಗತ್ತಿಸತಕ್ಕದ್ದು. ಕಂಪನಿ : ಗುತ್ತಿಗೆದಾರ : ಸಂಸ್ಥೆ ವಿವರಗಳನ್ನು ಒದಗಿಸತಕ್ಕದ್ದು.

9. ಷರತ್ತುಳ್ಳ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

10. ಯಾವ ಕಾರಣವನ್ನು ತಿಳಿಸದೇ ಅಥವಾ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕನ್ನು ಅಧಿಕಾರಯುಕ್ತ ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ.

11. ಜಂಟಿ ಪ್ರಯತ್ನದ ಕಂಪನಿಗಳು ಟೆಂಡರ್‌ನಲ್ಲಿ ಭಾಗವಹಿಸಲು ಅವಕಾಶವಿಲ್ಲ.

ಕಾಮಗಾರಿಯ ಬಗ್ಗೆ ಇತರ ಯಾವುದೇ ವಿವರವನ್ನು ಮೇಲಿನ ಕಛೇರಿಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಹೆದ್ದಾರಿ ಆಡಳಿತ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರ್,

ಪಿ.ಆರ್. 541 ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು.

## ಅಲ್ಪಾವದಿ ಟೆಂಡರ್ ಪ್ರಕಟಣೆ ಸಂ.12 / 2006-07.

## (ಎರಡು ಲಕೋಟೆ ಪದ್ಧತಿಯಲ್ಲಿ)

**ಸಂ.ಕಾಇಂ/ವಿವಿ ರಸ್ತೆ ಮತ್ತು ಕಟ್ಟಡಗಳು/ಬೆಂ/ಸಇ-1/2006-07/2136-48. ದಿನಾಂಕ:07ನೇ ಸೆಪ್ಟೆಂಬರ್ 2006.**

ಮೊಹರಾದ ಐಟಂವಾರು ಟೆಂಡರುಗಳನ್ನು ಕೆಳಕಾಣಿಸಿರುವ ಕಾಮಗಾರಿಗಳಿಗೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ 2000ರಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಿಂದ ನೊಂದಾಯಿಸಿರುವ ಒಂದನೇ ದರ್ಜೆಯ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ.

ಈ ಕಾಮಗಾರಿಗಳಿಗೆ ಎರಡು ಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆಯಲಾಗುತ್ತಿದ್ದು (1) ತಾಂತ್ರಿಕ ಬಿಡ್ (2) ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕವಾಗಿ ಮೊಹರು ಮಾಡಿ ಸಲ್ಲಿಸಬೇಕಾಗಿರುತ್ತದೆ. ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕವಾಗಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ನಮೂದಿಸಿ, ಈ ಎರಡು ಮೊಹರಾದ ಟೆಂಡರ್‌ಗಳನ್ನು ಬೇರೊಂದು ಲಕೋಟೆಯಲ್ಲಿಟ್ಟು ಮೊಹರು ಮಾಡಬೇಕು. ಈ ಲಕೋಟೆಯ ಮೇಲ್ಭಾಗದಲ್ಲಿ ಕಾಮಗಾರಿಯ ಹೆಸರು, ಗುತ್ತಿಗೆದಾರರ ಸಂಪೂರ್ಣ ಅಂಚೆ ವಿಳಾಸ ಬರೆದು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರಿಗೆ ಸಲ್ಲಿಸಬೇಕು.

1. ಖಾಲಿ ಟೆಂಡರ್ ಫಾರಂಗಾಗಿ ಗುತ್ತಿಗೆದಾರರು ಅರ್ಜಿಗಳನ್ನು ಸಲ್ಲಿಸುವ ದಿ:20.09.2006 ವೇಳೆ 5.30ಗಂಟೆಯವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಗುತ್ತಿಗೆದಾರರಿಗೆ ನೀಡಲು ನಿಗದಿಗೊಳಿಸಿರುವ ದಿ:25.09.06 ವೇಳೆ:5.30ಗಂಟೆಯವರೆಗೆ
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ನಿಗದಿಗೊಳಿಸಿರುವ ದಿ:28.09.2006.ವೇಳೆ:4.00ಗಂಟೆಯವರೆಗೆ.

ಭರ್ತಿ ಮಾಡಿದ ಟೆಂಡರ್‌ಗಳನ್ನು ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಬೆಂಗಳೂರು ವೃತ್ತ, ಬೆಂಗಳೂರು ಇವರ ಕಛೇರಿಯಲ್ಲಿಯೂ ದಿ:28.09.2006 ವೇಳೆ 4.00 ಗಂಟೆಯವರೆಗೆ ಪಿಡಬ್ಲ್ಯೂಜಿ-65 ಮತ್ತು 66 ಕೆಪಿಡಬ್ಲ್ಯೂಡಿ ಕೋಡ್ ಭಾಗ-2 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧಿನಿಯಮ-2000ರ ನಿಯಮಗಳಿಗೊಳಪಟ್ಟು ಸ್ವೀಕರಿಸಲಾಗುವುದು.

ಟೆಂಡರುಗಳನ್ನು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ತೆರೆಯಲಾಗುವುದು.

1. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: ಸಾಧ್ಯವಾದಲ್ಲಿ ದಿ:28-09-2006 ವೇಳೆ 4.30 ಅಥವಾ ನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ವೇಳೆ.
2. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದ ಗುತ್ತಿಗೆದಾರರಿಗೆ ಆರ್ಥಿಕ ಬಿಡ್ ತೆರೆಯುವ ದಿನಾಂಕ ಮತ್ತು ವೇಳೆಯನ್ನು ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಟ್ಟಿರುವ ಕೆಲಸದ ಮೊತ್ತ ಲಕ್ಷ ರೂಗಳಲ್ಲಿ | ಇ.ಎಂ.ಡಿ. ಮೊತ್ತ ರೂ. ಲಕ್ಷಗಳಲ್ಲಿ | ಟೆಂಡರ್ ಫಾರಂ ಬೆಲೆ ರೂ.ಗಳಲ್ಲಿ (ಹಿಂದಿರುಗಿಸಲಾಗುವುದಿಲ್ಲ) | ಕಾಮಗಾರಿ ನಿಗದಿ ಗೊಳಿಸಿರುವ ಕಾಲಾವಧಿ (ಮಳೆಗಾಲ ಸೇರಿ) | ಅರ್ಹ ದರ್ಜೆಯ ಗುತ್ತಿಗೆದಾರರು | ಟೆಂಡರ್ ಕರೆಯ ಸಂಖ್ಯೆ |
|---|---|---|---|---|---|---|---|
| 1 | 2 | 3 | 4 | 6 | 5 | 7 | |
| 1 | ಬೆಂಗಳೂರು ದಕ್ಷಿಣ ತಾಲ್ಲೂಕು ಬೆಂಗಳೂರು - ದೊಮ್ಮಸಂದ್ರ ರಸ್ತೆಯ ಹೊರವಲಯದ ವರ್ತುಲ ರಸ್ತೆಯಿಂದ ರೈಲ್ವೆ ಕ್ರಾಸಿಂಗ್ ವರೆಗೆ ಸರಪಳಿ15.56ಕಿಮೀ.ನಿಂದ 17.20ಕಿಮೀ.ವರೆಗೆ ನಾಲ್ಕುಪಥದ ರಸ್ತೆಯನ್ನಾಗಿ ಅಭಿವೃದ್ಧಿಪಡಿಸುವ ಕಾಮಗಾರಿ. | 270.66 | 2.70 | 20,000/- ತೆರಿಗೆ ಸೇರಿ | 3 ತಿಂಗಳು | 1ನೇ ದರ್ಜೆ | 2ನೇ ಕರೆ |

**ನಿಬಂಧನೆಗಳು:**

1. ಗುತ್ತಿಗೆದಾರರು ಕೆಳಕಂಡ ಯಂತ್ರೋಪಕರಣಗಳಿಗೆ ಸಂಬಂಧಿಸಿದಂತೆ ಎಂ.ಓ.ಆರ್.ಟಿ. ಅಂಡ್ ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ 40:60 ಟಿ.ಪಿ.ಹೆಚ್. ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ ಮತ್ತು ಪೇವರ್ ಫಿನೀಷರನ್‌ನ ಮಾಲೀಕತ್ವ , ಲೀಜ್; ಬಾಡಿಗೆಗೆ ಹೊಂದಿರುವ ಬಗ್ಗೆ ಪುರಾವೆಗಳನ್ನು ಒದಗಿಸತಕ್ಕದ್ದು.
2. ಗುತ್ತಿಗೆದಾರರು ಕ್ರ.ಸಂ.3ರಿಂದ 9ರವರೆಗಿನ ಯಂತ್ರೋಪಕರಣಗಳಿಗೆ ಮಾಲೀಕತ್ವ ಹೊಂದಿರುವ ಬಗ್ಗೆ ದಾಖಲಾತಿಗಳನ್ನು ಒದಗಿಸತಕ್ಕದ್ದು.

| ಕ್ರ.. ಸಂ. | ಯಂತ್ರೋಪಕರಣಗಳ ವಿವರ | ಬೇಕಾದ ಸಂ. | ಮಾಲೀಕತ್ವದ ಪುರಾವೆಗಳು |
|---|---|---|---|
| 1<br>2 | 40/60 ಟಿಪಿಹೆಚ್ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್<br>ಪೇವರ್ ಫಿನಿಷರ್ | 1<br>1 | ಖರೀದಿಸಿದ ಇನ್ವಾಯ್ಸ್/ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್/ ಲೀಜ್/ ಬಾಡಿಗೆ ಕರಾರು ಅಥವಾ ಬಾಡಿಗಗೆ ಪಡೆದಿರುವ ಬಗ್ಗೆ ಮಾಲೀಕರ ಒಪ್ಪಿಗೆ ಪತ್ರದೊಂದಿಗೆ ಮೂಲಕ ಮಾಲೀಕತ್ವದ ದಾಖಲಾತಿಗಳು |
| 3 | ವೈಬ್ರೇಟರಿ ರೋಡ್ ರೋಲರ್ | 1 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |

| | | | |
|---|---|---|---|
| 4 | ಸ್ಟಾಟಿಕ್ ರೋಡ್ ರೋಲರ್ | 2 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 5 | ಕಾಂಕ್ರೀಟ್ ಮಿಕ್ಸರ್ಸ್ | 2 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 6 | ವೈಬ್ರೇಟರ್ ಗಳು | 4 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 7 | ಟಿಪ್ಪರ್‌ಗಳು | 6 | ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಮಾಲೀಕತ್ವ ದೃಢೀಕರಣ ಪತ್ರ ಪಡೆದು ಸಲ್ಲಿಸಬೇಕು. |
| 8 | ವೆಹಿಕಲ್ ಮೌಂಟೆಂಡ್ ಬಿಟುಮಿನಸ್ ಮೆಕ್ಯಾನಿಕಲ್ ಸ್ಪ್ರೇಯರ್ | 1 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ (ಇನ್ವಾಯ್ಸ್ ಬಿಲ್ ಮೂಲ ಪ್ರತಿಯೊಂದಿಗೆ) |
| 9 | 40/60 ಟಿಪಿಹೆಚ್ ಸಾಮರ್ಥ್ಯದ ವೆಟ್ ಮಿಕ್ಸ್ ಪ್ಲಾಂಟ್ | 1 | ಇನ್ವಾಯ್ಸ್ ಬಿಲ್ ಅಥವಾ ರಿಜಿಸ್ಟರ್ ಸೇಲ್ ಡೀಡ್ |

3. ಕಾಮಗಾರಿಗೆ ಸಂಬಂಧಪಟ್ಟಂತೆ ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಇದೇ ರೀತಿಯ ರಸ್ತೆ ಅಭಿವೃದ್ಧಿ ಕೆಲಸವನ್ನು ಈಗ ಟೆಂಡರ್ ಗಿಟ್ಟಿರುವ ಮೊತ್ತದ ಕನಿಷ್ಟ ಶೇಕಡಾ–30ರಷ್ಟು ಮೊತ್ತದ ಕಾಮಗಾರಿಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುವ ಬಗ್ಗೆ ಪರ್ಯಾಯವಾಗಿ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಅಪೇಕ್ಷಿತ ಕಾಮಗಾರಿಯ ಮೊತ್ತದ ಶೇಕಡಾ–30ರಷ್ಟು ಇದೇ ರೀತಿಯ ಕಾಮಗಾರಿಯನ್ನು ನಿರ್ವಹಿಸಿ ಬಿಲ್ಲಾಗಿರುವುದರ ಬಗ್ಗೆ ಮೂಲ ದೃಢೀಕರಣ ಮೊತ್ತವನ್ನು ಸಂಬಂಧಿಸಿದ ಕಾರ್ಯಪಾಲಕ ಇಂಜಿನಿಯರ್ ರವರಿಂದ/ ಸಕ್ಷಮ ಪ್ರಾಧಿಕಾರದಿಂದ ದಾಖಲಾತಿ ಪಡೆದು ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಬೇಕು. ತಾಂತ್ರಿಕ ಬಿಡ್ ನಲ್ಲಿ ಪ್ರತಿಯೊಂದು ನಮೂನೆಯನ್ನು ಭರ್ತಿ ಮಾಡಿ ಪ್ರತಿ ಪುಟದಲ್ಲಿಯೂ ಗುತ್ತಿಗೆದಾರರು ಸಹಿ ಮಾಡಬೇಕು. ಗುತ್ತಿಗೆದಾರರು ಆರ್ಥಿಕ ವರ್ಷವಾರು ಪೂರ್ಣಗೊಳಿಸಿದ ಕಾಮಗಾರಿಗಳ ವಿವರಗಳನ್ನು (ಆರ್ಥಿಕ ಮತ್ತು ಭೌತಿಕ) ತಾಂತ್ರಿಕ ಬಿಡ್‌ನಲ್ಲಿ ಸಲ್ಲಿಸತಕ್ಕದ್ದು.
4. ಗುತ್ತಿಗೆದಾರರು ಟೆಂಡರ್ ಫಾರಂಗಳ ಬೆಲೆಯನ್ನು ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಡಿಡಿ ಅಥವಾ ನಗದು ರೂಪದಲ್ಲಿ ಅರ್ಜಿಯ ಜೊತೆ ಪಾವತಿ ಮಾಡಬೇಕು. ಅರ್ಜಿಯ ಜೊತೆಯಲ್ಲಿ ಗುತ್ತಿಗೆದಾರರು ನೊಂದಣಿ ಪುಸ್ತಕದ ಕಾಮಗಾರಿಯ ವಿವರಗಳೊಂದಿಗೆ ದಾಖಲಿಸಿ ಪ್ರತಿಯನ್ನು ಹಾಗೂ ಇತ್ತೀಚಿನ ಆದಾಯ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ತಪ್ಪಿದಲ್ಲಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.
5. ಇ.ಎಂ.ಡಿ. ಮೊತ್ತವನ್ನು ಷೆಡ್ಯೂಲ್/ ರಾಷ್ಟ್ರೀಕೃತ ಬ್ಯಾಂಕ್‌ಗಳ ಎಫ್.ಡಿ.ಆರ್. , ಡಿ.ಡಿ., ಎನ್.ಎಸ್.ಸಿ. (ಕಾರ್ಯಪಾಲಕ ಇಂಜಿನಿಯರ್ ಇವರ ಹೆಸರಿಗೆ ಪ್ಲೆಡ್ಜ್ ಮಾಡಬೇಕು) ಬ್ಯಾಂಕರ್ಸ್ ಗ್ಯಾರಂಟಿ, ಬ್ಯಾಂಕರ್ಸ್ ಚೆಕ್ ಇತ್ಯಾದಿಗಳ ರೂಪದಲ್ಲಿ ಕಾರ್ಯಪಾಲಕ ಇಂಜಿನಿಯರ್, ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದು ಸಲ್ಲಿಸಬೇಕು.
6. ತಾಂತ್ರಿಕ ಬಿಡ್‌ನ ಎಲ್ಲಾ ದಾಖಲಾತಿಗಳನ್ನು ನೋಟರಿಯವರಿಂದ ಪ್ರಮಾಣೀಕರಿಸಿ ಅಥವಾ ಕಾರ್ಯಪಾಲಕ ಇಂಜಿನಿಯರ್‌ರವರಿಗಿಂತ ಮೇಲ್ಪಟ್ಟ ಅಧಿಕಾರಿಯವರಿಂದ ಪ್ರಮಾಣೀಕರಿಸಿ ಲಗತ್ತಿಸಬೇಕು. ಟೆಂಡರ್ ತೆರೆಯುವ ದಿನ ಗುತ್ತಿಗೆದಾರರ ಮೂಲ ದಾಖಲೆಗಳನ್ನು ಪರಿಶೀಲನೆಗೆ ಸಲ್ಲಿಸಬೇಕು. ತಪ್ಪಿದಲ್ಲಿ ಟೆಂಡರನ್ನು ಅನರ್ಹಗೊಳಿಸಲಾಗುವುದು.
7. ಜಾಯಿಂಟ್ ವೆಂಚರ್‌ನಲ್ಲಿನ ಪಾಲುದಾರರು: ಸದಸ್ಯರುಗಳು ಪ್ರತ್ಯೇಕವಾಗಿ ಟೆಂಡರು ಸಲ್ಲಿಸುವಾಗ ಜಾಯಿಂಟ್ ವೆಂಚರ್‌ನ ಹೆಸರಿನಲ್ಲಿ ನಿರ್ವಹಿಸಿದ ಕಾಮಗಾರಿಗಳ ಬಗ್ಗೆ ದೃಢೀಕರಣ ಮತ್ತು ಜಾಯಿಂಟ್ ವೆಂಚರ್‌ನ ಹೆಸರಿನಲ್ಲಿರುವ ಯಂತ್ರೋಪಕರಣಗಳ ಮಾಲೀಕತ್ವವನ್ನು ಪರಿಗಣಿಸಲಾಗುವುದಿಲ್ಲ.
8. ನಿಬಂಧನೆಗೊಳಪಟ್ಟ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
9. ಆರ್ಥಿಕ ಬಿಡ್‌ನ ಷೆಡ್ಯೂಲ್–ಬಿ ನಲ್ಲಿ ಐಟಂವಾರು ದರಗಳನ್ನು ಅಂಕಿ ಮತ್ತು ಅಕ್ಷರಗಳಲ್ಲಿ ನಮೂದಿಸಬೇಕು.
10. ಯಾವುದೇ ಟೆಂಡರ್‌ನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಸಕ್ಷಮ ಪ್ರಾಧಿಕಾರಕ್ಕೆ ಇರುತ್ತದೆ.
11. ಹೆಚ್ಚಿನ ಮಾಹಿತಿಗಳನ್ನು ಕೆಳಗೆ ಸಹಿ ಮಾಡಿರುವವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.
12. ಯಶಸ್ವಿ ಗುತ್ತಿಗೆದಾರರು ಕಾರ್ಯಾದೇಶ ನೀಡಿದ 30ದಿನಗಳೊಳಗೆ ಕಡ್ಡಾಯವಾಗಿ ಕಾಮಗಾರಿಯ ಸ್ಥಳದಿಂದ 50ಕಿಮೀ ಒಳಗೆ ನಿಗದಿತ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ ಅನ್ನು ಸ್ವಂತ ಜವಾಬ್ದಾರಿಯ ಮೇಲೆ ಸ್ಥಾಪಿಸಬೇಕು ಹಾಗೂ ಸೂಚಿನಕ್ಷೆಯಲ್ಲಿ ಹಾಟ್ ಮಿಕ್ಸ್ ಸ್ಥಳವನ್ನು ನಕ್ಷೆಯಲ್ಲಿ ಗುರುತಿಸಿ ಕಾರ್ಯಪಾಲಕ ಇಂಜಿನಿಯರ್ ರವರಿಗೆ ಸಲ್ಲಿಸಬೇಕು.

13. ಟೆಂಡರಿಗಿಟ್ಟ ಮೊತ್ತದ ಶೇ.30ರಷ್ಟು ಮೊತ್ತಕ್ಕೆ ಷೆಡ್ಯೂಲ್/ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಲೈನ್ ಆಫ್ ಕ್ರೆಡಿಟ್ ಅನ್ನು ನಿಗದಿತ ನಮೂನೆ-ಕೆಯಲ್ಲಿ ಸಂಬಂಧಿಸಿದ ಕಾಮಗಾರಿಯ ಹೆಸರಿನೊಂದಿಗೆ ಭರ್ತಿ ಮಾಡಿ ನಿಗದಿತ ನಮೂನೆಯಲ್ಲಿ ತಾಂತ್ರಿಕ ಬಿಡ್ ನೊಂದಿಗೆ ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
14. ಈ ಕಾಮಗಾರಿಗಳ ಗುಣಮಟ್ಟವನ್ನು ಕಾಯ್ದುಕೊಂಡು, ಕಾಮಗಾರಿ ಪೂರ್ಣಗೊಂಡ ನಂತರ ಮೂರು ವರ್ಷಗಳವರೆಗೆ ರಸ್ತೆ ನಿರ್ವಹಣೆಯನ್ನು ಗುತ್ತಿಗೆದಾರರ ವೆಚ್ಚದಲ್ಲಿಯೇ ನಿರ್ವಹಿಸಬೇಕು ಎಂಬ ನಿಬಂಧನೆಯೊಂದಿಗೆ ಅನುಷ್ಠಾನಗೊಳಿಸಬೇಕು.
15. ಕಾಮಗಾರಿಗಳಿಗೆ ಅವಶ್ಯವಿರುವ ಸಾಮಗ್ರಿಗಳಾದ ಬಿಟುಮನ್ ಉಕ್ಕು ಮತ್ತು ಸಿಮೆಂಟ್‌ನ್ನು ಗುತ್ತಿಗೆದಾರರೇ ಸರಬರಾಜು ಮಾಡಿಕೊಂಡು ಗುಣನಿಯಂತ್ರಣ ಅಧಿಕಾರಗಳಿಂದ ಗುಣಮಟ್ಟದ ಬಗ್ಗೆ ದೃಢೀಕರಣ ಪತ್ರ ಪಡೆಯಬೇಕು.

ಕಾರ್ಯಪಾಲಕ ಇಂಜಿನಿಯರ್
ರಸ್ತೆ ಮತ್ತು ಕಟ್ಟಡಗಳ ವಿಶೇಷ ವಿಭಾಗ,
ಬೆಂಗಳೂರು.

ಪಿ.ಆರ್. 554

**ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಬೆಂಗಳೂರು-100**

**ಪ್ರಕಟಣೆ**

**ಸಂಖ್ಯೆ: ಕೇಕಾಬೆಂ / ಕಾವಿ / ಅಂಗಡಿಮಳಿಗೆ / 4583 / 2006-07, ದಿನಾಂಕ: 05ನೇ ಆಗಸ್ಟ್ 2006**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಚಯದಲ್ಲಿನ ಅಂಗಡಿ ಮಳಿಗೆಗಳಿಗೆ ಬಹಿರಂಗ ಹರಾಜು ಮೂಲಕ ಸ್ಪರ್ಧಾತ್ಮಕ ದರಗಳನ್ನು ಕರೆದು 2006-07ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ನೀಡುವ ಬಹಿರಂಗ ಹರಾಜನ್ನು ದಿನಾಂಕ 25.09.2006 ರಂದು ಬೆಳಿಗ್ಗೆ 11.00 ಗಂಟೆಗೆ ನಿಗಧಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 4400ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಚಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ವಾಣಿಜ್ಯ ಮಳಿಗೆಯ ಹೆಸರು / ಕ್ರಮ ಸಂಖ್ಯೆ | ವಿಸ್ತೀರ್ಣ ಚ.ಅಡಿ.ಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುವ ಠೇವಣಿ |
|---|---|---|---|---|---|---|
| 1. | ಹಾಲಿನ ಕೇಂದ್ರ - 04 | (3.25 X 6) (1 ಯೂನಿಟ್) | 11 ತಿಂಗಳು | 980/- | ನಿಗದಿಯಾದ ಬಾಡಿಗೆಯ 10 ತಿಂಗಳ ಮೊತ್ತವನ್ನು ಠೇವಣಿಯಾಗಿ ಇಡುವುದು | 1,000/- |
| 2. | ಸಲೂನ್ - 01 | (3.25 X 6) (1 ಯೂನಿಟ್) | 11 ತಿಂಗಳು | 980/- | | 1,000/- |
| 3. | ವರ್ಕ್‌ಶಾಪ್ - 10 | (3.25 X 6) (1 ಯೂನಿಟ್) | 11 ತಿಂಗಳು | 980/- | | 1,000/- |
| 4. | ತರಕಾರಿ - 06 | (3.25 X 6) (1 ಯೂನಿಟ್) | 11 ತಿಂಗಳು | 980/- | | 1,000/- |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳು ವಿವರಗಳು ಬೇಕಾಗಿದ್ದಲ್ಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು,
ಕೇಂದ್ರ ಕಾರಾಗೃಹ, ಬೆಂಗಳೂರು.

ಪಿ.ಆರ್. 533

**ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ**

**ಬಹಿರಂಗ ಹರಾಜು ಪ್ರಕಟಣೆ**

**ಸಂ: ಎಂ.ಟಿ. / 919 / 2006, ದಿನಾಂಕ: 01ನೇ ಸೆಪ್ಟೆಂಬರ್ 2006**

**ವಿಷಯ :** ಗದಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ವಾಹನ ಸಾರಿಗೆ ವಿಭಾಗದಲ್ಲಿರುವ 03 ಸಂಖ್ಯೆಯ ಅನುಪಯುಕ್ತ ಹಳೆಯ ವಾಹನಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1) ಪ್ರಧಾನ ಕಛೇರಿಯ ಆದೇಶ ಸಂ:ಎಂ.ಟಿ.(1) / 11 / 06-07, ದಿ: 30.05.06.

2) ಈ ಕಛೇರಿಯ ಬಹಿರಂಗ ಹರಾಜು ಪ್ರಕಟಣೆ ಸಮ ಸಂಖ್ಯೆ: ದಿ: 08.08.06.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಮೇಲಿನ ಉಲ್ಲೇಖ-2 ರಲ್ಲಿ ಈಗಾಗಲೇ ದಿ: 02.09.06 ರಂದು ಈ ಕೆಳಗೆ ಹೆಸರಿಸಿರುವ 02 ಸಂಖ್ಯೆಯ ಜೀಪ್‌ಗಳು ಹಾಗೂ 01 ಮೋಟಾರ್ ಸೈಕಲ್‌ನ್ನು ಗದಗ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಹರಾಜು ಮಾಡಲು ನಿಗದಿಪಡಿಸಲಾಗಿತ್ತು. ಆದರೆ ಕಛೇರಿಯ ಆಡಳಿತಾತ್ಮಕ ಕಾರಣಗಳಿಂದಾಗಿ ನಿಗಧಿಪಡಿಸಿದ ಬಹಿರಂಗ ಹರಾಜನ್ನು ದಿನಾಂಕ: 2.9.06 ರ ಬದಲಾಗಿ ಮುಂದೂಡಿ ದಿನಾಂಕ: 27.10.06 ರಂದು ಬೆಳಗ್ಗೆ 11.00 ಘಂಟೆಗೆ ಬಹಿರಂಗ ಹರಾಜು ಮಾಡಲು ನಿರ್ಧರಿಸಲಾಗಿದೆ.

**ವಾಹನಗಳ ವಿವರ**

| ಅ. ಸಂ. | ವಾಹನದ ನೋಂದಣಿ ಸಂಖ್ಯೆ | ಮಾದರಿ | ತಯಾರಿಕೆ ವರ್ಷ |
|---|---|---|---|
| 1 | ಕೆಎ-25 / ಜಿ-120 | ಮಹೇಂದ್ರಾ ಜೀಪ್ | 1994 |
| 2 | ಎಂಇಡಬ್ಲ್ಯೂ-9501 | ಮೋಟಾರ್ ಸೈಕಲ್ | 1976 |
| 3 | ಕೆಎ-25 / ಜಿ-10 | ಟೆಂಪೂ ಟ್ರ್ಯಾಕ್ಸ್ | 1990 |

ಮೇಲೆ ನಮೂದಿಸಿರುವ ನಿರುಪಯುಕ್ತ ವಾಹನಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಬಹಿರಂಗ ಹರಾಜು ಮಾಡಲಾಗುವುದು.

**ಹರಾಜಿನ ನಿಬಂಧನೆಗಳು :**

1. ಬಹಿರಂಗ ಹರಾಜಿನ ಮೂಲಕ ನಿರುಪಯುಕ್ತ ವಾಹನಗಳನ್ನು ವಿಲೇವಾರಿ ಮಾಡುವುದಿದ್ದು ಅತೀ ಹೆಚ್ಚಿನ ಬೆಲೆಗೆ ಬೇಡಿಕೆ ಬಂದರೆ ಮಾತ್ರ ವಾಹನವನ್ನು ಬಿಡ್‌ದಾರರಿಗೆ ನೀಡಲಾಗುವುದು.
2. ನಿರುಪಯುಕ್ತ ವಾಹನಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3. ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ರೂ. 5,000/ - (ರೂ. ಐದು ಸಾವಿರ ಮಾತ್ರ) ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಹರಾಜು ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ. ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
4. ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನಗಳನ್ನು ಡಿ.ಎ.ಆರ್. ಹೆಡ್ ಕ್ವಾಟರ್ಸ್ ಗದಗದಲ್ಲಿ ಪರಿಶೀಲಿಸಬಹುದು.
5. ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು.
6. ಠೇವಣಿಯನ್ನು ತುಂಬಿದ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ. ಠೇವಣಿ ಹಣವನ್ನು ನಗದು ರೂಪದಲ್ಲಿ ಮಾತ್ರ ಸ್ವೀಕರಿಸಲಾಗುತ್ತದೆ.
7. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್ ದರವನ್ನು ದಾಖಲಿಸಿಕೊಳ್ಳಲಾಗುತ್ತದೆ.
8. ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಸವಾಲುದಾರರೆಂದು ಪರಿಗಣಿಸಲಾಗುವುದು.
9. ನಿರುಪಯುಕ್ತ ವಾಹನಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ಮಾರಾಟ ತೆರಿಗೆಯನ್ನು ವಿಧಿಸಲಾಗುವುದು.
10. ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
11. ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಗದಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
12. ಯಶಸ್ವಿಯಾದ ಸವಾಲುದಾರರು ಬಿಡ್ ದರದ ಶೇಕಡಾ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್‌ದಾರರ ಬಿಡ್‌ನ್ನು ಅನುಮೋದಿಸಿದ ನಂತರ ಬಾಕಿ ಹಣವನ್ನು ಮತ್ತು ಪ್ರಸ್ತುತ ತೆರಿಗೆಯನ್ನು ಸಂಪೂರ್ಣವಾಗಿ ಪಾವತಿ ಮಾಡಿದ ನಂತರ ಹರಾಜು ಮಾಡಲಾದ ನಿರುಪಯುಕ್ತ ವಾಹಗಳನ್ನು ಏಳು (7) ದಿವಸಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
13. ಹರಾಜಿನ ದಿನಾಂಕವನ್ನು ಬದಲಾಯಿಸುವ, ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಗದಗ ರವರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಜಿಲ್ಲಾ ಪೊಲೀಸ್ ಅಧಿಕಾರಿಗಳು
ಗದಗ ಜಿಲ್ಲೆ, ಗದಗ.

ಪಿ.ಆರ್. 551

## ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ

## ಬಹಿರಂಗ ಹರಾಜು ಪ್ರಕಟಣೆ

**ಸಂ: ಎಂ.ಟಿ. / 918 / 06, ದಿನಾಂಕ: 01ನೇ ಸೆಪ್ಟೆಂಬರ್ 2006**

**ವಿಷಯ :** ಈ ಜಿಲ್ಲೆಯಲ್ಲಿಯ ವಾಹನ ಸಾರಿಗೆ ವಿಭಾಗದ ದಾಸ್ತಾನಿನಲ್ಲಿರುವ ದಿ: 01.04.05 ರಿಂದ 31.03.06 ರಲ್ಲಿಯ ಬಿಡಿ ಭಾಗಗಳನ್ನು ಮತ್ತು ಟಾಯರ್ ಟ್ಯೂಬ್‌ಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** 1) ಸರ್ಕಾರಿ ಆದೇಶ ನಂ. ಎಚ್‌ಪಿ / 198 / ಎಞಂವಿ / 2000, ದಿ: 19.6.03.

2) ಆರ್‌ಪಿಐ, ಡಿಎಆರ್ ಗದಗ ರವರ ವರದಿ ಸಂ: ಡಿಎಆರ್ / ಎಂ.ಟಿ./ ನಿ.ಬಿ.ಭಾ.ಟಾ.ಟ್ಯೂ / 140 / 06-07, ದಿ: 29.06.06.

3) ಈ ಕಛೇರಿಯ ಬಹಿರಂಗ ಹರಾಜು ಪ್ರಕಟಣೆ ಸಮ ಸಂಖ್ಯೆ ದಿ: 8.08.06 ಮತ್ತು ದಿ: 17.08.06.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಮೇಲಿನ ಉಲ್ಲೇಖ-3 ರಲ್ಲಿ ಈಗಾಗಲೇ ದಿ: 02.09.06 ರಂದು 2005-06ನೇ ಸಾಲಿನ ನಿರುಪಯುಕ್ತಗೊಂಡ ವಿವಿಧ ರೀತಿಯ ವಾಹನಗಳ ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ಗದಗ ಜಿಲ್ಲಾ ಪೊಲೀಸ್ ಮೀಸಲು ಪಡೆ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಹರಾಜು ಮಾಡಲು ನಿಗದಿಪಡಿಸಲಾಗಿತ್ತು. ಆದರೆ ಕಛೇರಿಯ ಆಡಳಿತಾತ್ಮಕ ಕಾರಣಗಳಿಂದಾಗಿ ನಿಗಧಿಪಡಿಸಿದ ಬಹಿರಂಗ ಹರಾಜನ್ನು ದಿನಾಂಕ: 02.09.06 ರ ಬದಲಾಗಿ ಮುಂದೂಡಿ ದಿನಾಂಕ: 27.10.06 ರಂದು ಬೆಳಗ್ಗೆ 11.00 ಘಂಟೆಗೆ ಬಹಿರಂಗ ಹರಾಜು ಮಾಡಲು ನಿರ್ಧರಿಸಲಾಗಿದೆ.

| ಅ. ಸಂ. | ಬಿಡಿಭಾಗಗಳ ವಿವರ | ಪ್ರಮಾಣ |
|---|---|---|
| 1 | ಅಲ್ಯೂಮಿನಿಯಂ | 12 ಕೆ.ಜಿ. |
| 2 | ಎಲ್ಲಾ ಬೇರಿಂಗ್‌ಗಳು | 80 ಪೀಸ್ |
| 3 | ಶ್ಯಾಕಾಬ್ಸರ ಬಾರ್ | 22 ಪೀಸ್ |
| 4 | ಟೈರಾಡ ಎಂಡ್ | 40 ಪೀಸ್ |
| 5 | ಜಾಯಿಂಟ್ ಕ್ರಾಸ್ | 10 ಪೀಸ್ |
| 6 | ವ್ಹೀಲ್ಸ್ ಶೀಲೆಂಡರ್ಸ್ | 24 ಪೀಸ್ |
| 7 | ಯೋಕ & ಟಿಥ | 06 ಪೀಸ್ |
| 8 | ಸ್ಲೂವ | 16 ಪೀಸ್ |
| 9 | ಶೆಕಲ್ಸ್ | 12 ಪೀಸ್ |
| 10 | ಹೆಡ್ | 02 ಪೀಸ್ |
| 11 | ರೇಡಿಯೆಟರ್ | 01 ಪೀಸ್ |
| 12 | ಎಲ್ಲಾ ಕಬ್ಬಿಣದ ಸಾಮಗ್ರಿಗಳು | 40 ಕೆ.ಜಿ. |
| 13 | 600 x 16 ಸೈಜಿನ | 25 ಟಾಯರ್ಸ & 25 ಟ್ಯೂಬ್ಸ್ |
| 14 | 670 x 15 ಸೈಜಿನ | 05 ಟಾಯರ್ಸ, 05 ಟ್ಯೂಬ್ |
| 15 | 650 x 16 ಸೈಜಿನ | 05 ಟಾಯರ್ಸ 05 ಟ್ಯೂಬ್ |
| 16 | 195 - 70 R 14 | 05 ಟಾಯರ್ಸ್ & 05 ಟ್ಯೂಬ್ಸ್ |
| 17 | 195 - 80 R 15 | 10 ಟಾಯರ್ಸ & 10 ಟ್ಯೂಬ್ |

**ಹರಾಜಿನ ನಿಬಂಧನೆಗಳು :**

1. ಬಹಿರಂಗ ಹರಾಜಿನ ಮೂಲಕ ನಿರುಪಯುಕ್ತ ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ವಿಲೇವಾರಿ ಮಾಡುವುದಿದ್ದು ಅತೀ ಹೆಚ್ಚಿನ ಬೆಲೆಗೆ ಬೇಡಿಕೆ ಬಂದರೆ ಮಾತ್ರ ಬಿಡಿಭಾಗಗಳನ್ನು ಹಾಗೂ ಟಾಯರ್ ಟ್ಯೂಬ್‌ಗಳನ್ನು ಬಿಡ್‌ದಾರರಿಗೆ ನೀಡಲಾಗುವುದು.
2. ನಿರುಪಯುಕ್ತ ಟೈರ್ - ಟ್ಯೂಬ್ ಮತ್ತು ಬಿಡಿಭಾಗಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
3. ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಮುನ್ನ ರೂ. 1,000/ - (ರೂ. ಒಂದು ಸಾವಿರ ಮಾತ್ರ) ಗಳ ಠೇವಣಿಯನ್ನು ಕಛೇರಿಯಲ್ಲಿ ಪಾವತಿಸತಕ್ಕದ್ದು. ಹರಾಜು ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯಲಾಗುವುದಿಲ್ಲ. ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
4. ಆಸಕ್ತ ಬಿಡ್‌ದಾರರು ಕಛೇರಿ ವೇಳೆಯಲ್ಲಿ ನಿರುಪಯುಕ್ತ ವಾಹನಗಳನ್ನು ಡಿ.ಎ.ಆರ್. ಹೆಡ್ ಕ್ವಾಟರ್ಸ್ ಗದಗದಲ್ಲಿ ಪರಿಶೀಲಿಸಬಹುದು.
5. ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು.
6. ಠೇವಣಿಯನ್ನು ತುಂಬಿದ ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ. ಠೇವಣಿ ಹಣವನ್ನು ನಗದು ರೂಪದಲ್ಲಿ ಮಾತ್ರ ಸ್ವೀಕರಿಸಲಾಗುತ್ತದೆ.

7. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬಿಡ್‌ದರವನ್ನು ದಾಖಲಿಸಿಕೊಳ್ಳಲಾಗುತ್ತದೆ.

8. ಯಾರು ಅತೀ ಹೆಚ್ಚಿನ ದರವನ್ನು ಸೂಚಿಸುವರೋ ಅವರನ್ನು ಯಶಸ್ವಿ ಸವಾಲುದಾರರೆಂದು ಪರಿಗಣಿಸಲಾಗುವುದು.

9. ನಿರುಪಯುಕ್ತ ವಾಹನ ಬಿಡಿಭಾಗಗಳು / ಟಾಯರ್-ಟ್ಯೂಬ್‌ಗಳ ಮೇಲೆ ನಿಯಮ ಪ್ರಕಾರ ಚಾಲ್ತಿಯಲ್ಲಿರುವ ಮಾರಾಟ ತೆರಿಗೆಯನ್ನು ವಿಧಿಸಲಾಗುವುದು.

10. ಹರಾಜು ಮುಗಿದ ತಕ್ಷಣವೇ ಯಶಸ್ವಿಯಾಗದ ಬಿಡ್‌ದಾರರ ಠೇವಣಿಯನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.

11. ಹರಾಜು ಮಾಡುವ ವೇಳೆಯಲ್ಲಿ ಯಾವುದೇ ವಾದ ವಿವಾದ ಉದ್ಭವಿಸಿದಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಗದಗ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

12. ಯಶಸ್ವಿಯಾದ ಸವಾಲುದಾರರು ಬಿಡ್‌ದರದ ಶೇಕಡಾ 25 ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಮತ್ತು ತೆರಿಗೆಯನ್ನು ಸಂಪೂರ್ಣವಾಗಿ ಪಾವತಿ ಮಾಡಿದ ನಂತರ ಹರಾಜು ಮಾಡಲಾದ ನಿರುಪಯುಕ್ತ ಬಿಡಿಭಾಗಗಳನ್ನು ಮತ್ತು ಟಾಯರ್-ಟ್ಯೂಬ್‌ಗಳನ್ನು ಏಳು (7) ದಿವಸಗಳೊಳಗಾಗಿ ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25 ರಷ್ಟು ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

13. ಹರಾಜಿನ ದಿನಾಂಕವನ್ನು ಬದಲಾಯಿಸುವ, ಹರಾಜಿನಲ್ಲಿ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಗದಗ ರವರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಜಿಲ್ಲಾ ಪೊಲೀಸ್ ಅಧಿಕಾರಿಗಳು
ಗದಗ ಜಿಲ್ಲೆ, ಗದಗ.

ಪಿ.ಆರ್. 552

**ಆಯುಕ್ತರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, 7ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಕಟ್ಟಡ, ಕಾವೇರಿ ಭವನ, ಕೆಂಪೇಗೌಡ ರಸ್ತೆ, ಬೆಂಗಳೂರು-9**

**ಹರಾಜು ಪ್ರಕಟಣೆ**

**ಸಂಖ್ಯೆ: ಜಅಇ / ಆಡಳಿತ / ವಿನಿ-5 / ವಿವ-49 / 06-07, ದಿನಾಂಕ: 02ನೇ ಸೆಪ್ಟೆಂಬರ್ 2006.**

**ವಿಷಯ :** ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಕಛೇರಿಯ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಕಛೇರಿಯಲ್ಲಿ ಲಭ್ಯವಿರುವ ಈ ಕೆಳಕಂಡ ಕ್ರ.ಸಂ. 1 ರಿಂದ 12 ರ ವರೆಗಿನ ಅನುಪಯುಕ್ತ ವಸ್ತುಗಳನ್ನು ಕೆಳಕಂಡ ನಿಬಂಧನೆಗೊಳಪಟ್ಟು ಈ ಕಛೇರಿಯಲ್ಲಿ ವಸ್ತುಗಳು ಯಾವ ರೀತಿಯಲ್ಲಿ ಇದೆಯೋ ಅದೇ ರೀತಿಯಲ್ಲಿ ದಿನಾಂಕ 30.9.2006 ರಂದು ಮಧ್ಯಾಹ್ನ 3.30 ಗಂಟೆಗೆ ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಲು ಈ ಮೂಲಕ ಕೋರಲಾಗಿದೆ.

**ಅನುಪಯುಕ್ತ ವಸ್ತುಗಳ ಪಟ್ಟಿ**

| ಕ್ರಮ ಸಂಖ್ಯೆ | ದಾಸ್ತಾನು ವಸ್ತುಗಳು | ಪರಿಮಾಣ |
|---|---|---|
| 1. | "ಎಸ್" ಟೈಪ್ ಚೇರ್ | 5 |
| 2. | ಅಲ್ಯುಮಿನಿಯಂ ಕುಷನ್ ಚೇರ್ | 3 |
| 3. | ಆಫೀಸರ್ (ರೊಟೇಟಿಂಗ್) ಚೇರ್ | 1 |
| 4. | ಫೂಟ್ ರಗ್ಸ್ ರೋಲ್ (ಕಟ್‌ಪೀಸ್) | 8 |
| 5. | ಹಳೆಯ ಕಂಪ್ಯೂಟರ್ ಮಾನಿಟರ್ ವಿತ್ ಸಿ.ಪಿ.ಯು. | 3 |
| 6. | ಹಳೆಯ ಸೋಫ (ಸ್ಟಾಂಡ್ ಇರುವುದಿಲ್ಲ) | 1 |
| 7. | ವಾಹನಗಳ ಹಳೆಯ ಬಿಡಿಭಾಗಗಳು | 50 ಕೆ.ಜಿ. (ಅಂದಾಜು) |
| 8. | ಮಾನೀಟರ್ | 1 |
| 9. | ಹಳೆಯ ಪ್ರಿಂಟರ್ | 1 |
| 10. | ಟೈಪ್‌ರೈಟಿಂಗ್ ಮಿಷನ್ (ಹಳೆಯ) | 2 |
| 11. | ಮರದ ಕುರ್ಚಿ (ಮುರಿದಿರುವ) | 1 |
| 12. | ಸ್ಟೀಲ್ ಫೋಲ್ಡಿಂಗ್ ಚೇರ್ಸ್ | 2 |

1. ಹರಾಜಿನಲ್ಲಿ ಪಾಲ್ಗೊಳ್ಳಲು ಇಚ್ಛೆಯುಳ್ಳವರು ರೂ. 1000-00 ನ್ನು ಮುಂಗಡ ಠೇವಣಿಯಾಗಿ ಹರಾಜಿನ ದಿನ ಬೆಳಿಗ್ಗೆ 11.00 ಗಂಟೆಯಿಂದ 1.00 ಗಂಟೆಯೊಳಗೆ ಕಟ್ಟಬೇಕು.

2. ಯಶಸ್ವಿ ಬಿಡ್‌ದಾರರು ಮಾರಾಟ ತೆರಿಗೆಯನ್ನು ಸರ್ಕಾರದ ನಿಯಮದಂತೆ ಪಾವತಿ ಮಾಡತಕ್ಕದ್ದು.

3. ಹರಾಜಿಗೆ ಇಟ್ಟ ವಸ್ತುಗಳನ್ನು ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇಲ್ಲಿ ಕಛೇರಿಯ ದಿನಗಳಂದು ಪರೀಕ್ಷಿಸಬಹುದು.

4. ಜಯಪ್ರದವಾದ ಹರಾಜು ನಿರ್ಣಯವನ್ನು ಅತ್ಯುನ್ನತ ಹರಾಜು ಬೆಲೆಯ ಮೇಲೆ ನಿರ್ಣಯಿಸಲಾಗುವುದು.

5. ಹರಾಜಿನ ಪ್ರಕಟಣೆಯಲ್ಲಿ ಯಾವುದೇ ವಿವಾದವಾದ ಪಕ್ಷದಲ್ಲಿ ಹರಾಜನ್ನು ತಿರಸ್ಕರಿಸುವ / ಮುಂದುವರೆಸುವ ಹಾಗೂ ರದ್ದುಪಡಿಸುವ ಹಕ್ಕುಗಳು ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಯವರಿಗೆ ಇರುತ್ತದೆ.

6. ಹರಾಜಿನ ಎಲ್ಲಾ ವಿಷಯಗಳಲ್ಲಿ ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ ಮತ್ತು ಭಾಗವಹಿಸುವ ಹರಾಜಿನ ಬಿಡ್ಡುದಾರರು ಈ ತೀರ್ಮಾನಕ್ಕೆ ಬದ್ದರಾಗಿರಬೇಕಾಗುತ್ತದೆ.

7. ಹರಾಜಿಗೆ ಸಂಬಂಧಿಸಿದಂತೆ ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು ಅವರ ಅನುಮೋದನೆ ಪಡೆದ ನಂತರ ಹೆಚ್ಚು ಬಿಡ್ ಮಾಡಿದ ಹರಾಜುದಾರರು ನಿಗದಿತ 7 ದಿನಗಳೊಳಗಾಗಿ ಪೂರ್ತಿ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡಿ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಹರಾಜಿನ ಸ್ಥಳದಿಂದ ತೆಗೆದುಕೊಂಡು ಹೋಗತಕ್ಕದ್ದು. ಯಾವ ಕಾರಣದಿಂದಲೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಈ ನಿಯಮವನ್ನು ಪಾಲಿಸದಿದ್ದಲ್ಲಿ ಅವರ ಮುಂಗಡ ಠೇವಣಿ ಹಣವನ್ನು ಸರ್ಕಾರದ ಖಾತೆಗೆ ಯಾವ ರೀತಿಯ ತಿಳುವಳಿಕೆ ಕೊಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

8. ಜಯಶೀಲರಾದ ಹರಾಜುದಾರರನ್ನು ಹೊರತು ಪಡಿಸಿ ಉಳಿದ ಬಿಡ್‌ದಾರರ ಮುಂಗಡ ಠೇವಣಿಯನ್ನು ಹರಾಜಿನ ಅನಂತರ ಹಿಂತಿರುಗಿಸಲಾಗುವುದು.

ಆಯುಕ್ತರ ಪರವಾಗಿ,
ಜಲಾನಯನ ಅಭಿವೃದ್ಧಿ ಇಲಾಖೆ,
ಬೆಂಗಳೂರು.

ಪಿ.ಆರ್. 535

## ಜಲ ಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆ

**ಕಾರ್ಯ ನಿರ್ವಾಹಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ**

**ಟೆಂಡರ್ ಪ್ರಕಟಣೆ**

**(ಎರಡು ಲಕೋಟೆ ಪದ್ದತಿ)**

**ನಂ. ಸನೀವಿಗು /ಯೋಶಾ-2 /ಟೆಂಡರ /ಆಲೂರ ಕೆರೆ ನಿರ್ಮಾಣ /2006-07 /1917, ದಿನಾಂಕ: 18ನೇ ಆಗಸ್ಟ್ 2006**

ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಿದ ಮೊದಲನೆ ದರ್ಜೆ ಗುತ್ತಿಗೆದಾರರಿಂದ ಕಾರ್ಯ ನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರಿಂದ ಎರಡು ಲಕೋಟೆ ಅಂದರೆ **ತಾಂತ್ರಿಕ ಮತ್ತು ಆರ್ಥಿಕ** ಬಿಡ್ ಪದ್ದತಿಯಲ್ಲಿ ಅರ್ಜಿಗಳನ್ನು ಅಹ್ವಾನಿಸಲಾಗಿದೆ. ಕಾಮಗಾರಿಯ ವಿವರ ಈ ಕೆಳಗೆ ತೋರಿಸಿದ ನಮೂನೆಯಲ್ಲಿ ಇರುತ್ತದೆ.

ಗುತ್ತಿಗೆದಾರರು ಅಂದರೆ ವೈಯುಕ್ತಿಕ/ಫರ್ಮ/ಸಂಯುಕ್ತವಾಗಿ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು/ಫರ್ಮ ಅಥವಾ ಎರಡೂ ಹೊಂದಿರುವ ಪ್ರಮುಖ ಪಾಲುದಾರರು. ಗುತ್ತಿಗೆದಾರರು ಖಾಲಿ ತಾಂತ್ರಿಕ ಮತ್ತು ಆರ್ಥಿಕ ಬಿಡ್ ದಸ್ತಾವೇಜಗಳನ್ನು ಕಾರ್ಯ ನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಕಛೇರಿಯಿಂದ ಕಛೇರಿ ಕೆಲಸದ ವೇಳೆಯಲ್ಲಿ ಲಿಖಿತ ಅರ್ಜಿ ಜೊತೆ ಖಾಲಿ ಟೆಂಡರ ಫಾರ್ಮ ಮೊತ್ತವನ್ನು ಸಂದಾಯ ಮಾಡಿ ಪಡೆಯಬಹುದು. ಖಾಲಿ ಟೆಂಡರ ಫಾರ್ಮ ಮೊತ್ತವನ್ನು ಹಿಂದಿರುಗಿಸಲಾಗುವುದಿಲ್ಲ.

**ಕಾಮಗಾರಿಯ ವಿವರಗಳು**

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಖಾಲಿ ಟೆಂಡರ ಫಾರ್ಮಿನ ಬೆಲೆ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್) (ದ್ವಿಪ್ರತಿಗಳು) ಎಲ್ಲಾ ತೆರಿಗೆ ಸೇರಿ (ಹಿಂದಿರುಗಿಸಲಾಗದು) (ರೂ.ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸ ಬೇಕಾದ ಅವಧಿ (ಮಳೆಗಾಲ ಸೇರಿ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಆಲೂರ ಗ್ರಾಮದ ಹತ್ತಿರ ಹೊಸ ಕೆರೆ ನಿರ್ಮಾಣ ಕಾಮಗಾರಿ. | 232.00 | 2,32,000.00 | 25000.00 | ಮೊದಲನೆಯ ದರ್ಜೆ | 10 ಕ್ಯಾಲೆಂಡರ ತಿಂಗಳುಗಳು (ಮಳೆಗಾಲ ಸೇರಿ) |

ಎರಡು ಲಕೋಟೆ ಟೆಂಡರ ಸಲ್ಲಿಸುವಲ್ಲಿ ತಾಂತ್ರಿಕ ಬಿಡ್ ಸೆಕ್ಷನ್-1 ಮತ್ತು ಆರ್ಥಿಕ ಬಿಡ್ ಸೆಕ್ಷನ್-2 ಎಂಬ ಪದ್ದತಿಯನ್ನು ಅನುಸರಿಸುವುದು. ತಾಂತ್ರಿಕ ಬಿಡ್ಡಿನ ಮೌಲ್ಯ ಮಾಪನವನ್ನು ಅರ್ಜಿದಾರರು ಸಲ್ಲಿಸಿರುವ ವಿವರಗಳ ಆಧಾರದ ಮೇಲೆಯೇ ಅರ್ಹತೆಯನ್ನು ಪರಿಗಣಿಸಲಾಗುವುದು.

**I) ಅರ್ಜಿ ಸಲ್ಲಿಸುವ ವಿಧಾನ**

ಗುತ್ತಿಗೆದಾರರು ಖಾಲಿ ಟೆಂಡರ ಫಾರ್ಮಗಳನ್ನು ಪಡೆಯಲು ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ, ಪರಿಶೀಲಿಸಿಕೊಂಡು ಅರ್ಜಿಯ ಜೊತೆಗೆ ನಕಲು ಪ್ರತಿಗಳು ಲಗತ್ತಿಸುವುದು.

1) ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.

2) ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರನ್ಸ್ ಪ್ರಮಾಣ ಪತ್ರ

3) ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆ ಕ್ಲಿಯರನ್ಸ್ ಪ್ರಮಾಣ ಪತ್ರ.

**II) ಖಾಲಿ ಟೆಂಡರ ಫಾರ್ಮಗಳಿಗೆ ಹಣ ಸಂದಾಯ ಮಾಡುವ ವಿಧಾನ**

ಖಾಲಿ ಟೆಂಡರ ಫಾರ್ಮಗಳಿಗೆ ಹಣವನ್ನು ನಗದು/ಡಿ.ಡಿ./ಬ್ಯಾಂಕರ ಚೆಕ್ಕ ರೂಪದಲ್ಲಿ ಸಂದಾಯ ಮಾಡಬಹುದು. ಒಂದು ವೇಳೆ ಡಿ.ಡಿ. ಅಥವಾ ಬ್ಯಾಂಕರ ಚೆಕ್ಕ ಇದ್ದಲ್ಲಿ ಈ ಡಿ.ಡಿ. ಅಥವಾ ಬ್ಯಾಂಕರ ಚೆಕ್ಕನ್ನು ಕಾರ್ಯ ನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ ಅಥವಾ ಯಾವುದೇ ಶೆಡ್ಯೂಲ್ಡ ಬ್ಯಾಂಕಿನಿಂದ ಸ್ಟೇಟ ಬ್ಯಾಂಕ ಆಫ್ ಹೈದ್ರಾಬಾದ ನಲ್ಲಿ ನಗದಿಕರಿಸುವಂತಾಗಿರತಕ್ಕದ್ದು.

**III) ಇ.ಎಮ್.ಡಿ. ಸಲ್ಲಿಸುವ ವಿಧಾನ**

1. ಇ.ಎಂ.ಡಿಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕರ ಚೆಕ್ಕನ್ನು ಕಾರ್ಯ ನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಹೆಸರಿಗೆ ಪಡೆದಿರಬೇಕು. ಇ.ಎಮ್.ಡಿ.ಯನ್ನು ನಿಗದಿಪಡಿಸಿದ ದಿನಾಂಕದಂದು ಸಲ್ಲಿಸುವುದು. ಈ ಇ.ಎಮ್.ಡಿ.ಯನ್ನು ಟೆಂಡರ ತೆರೆದ ದಿನಾಂಕದಿಂದ 180 (ಒಂದು ನೂರಾ ಎಂಬತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು ಹಾಗೂ ಅಯಶಸ್ವಿ ಬಿಡ್ಡುದಾರರ ಇ.ಎಮ್.ಡಿ.ಯನ್ನು ಟೆಂಡರ ತೆರೆದ ದಿನಾಂಕದಿಂದ 90 (ತೊಂಬತ್ತು) ದಿನಗಳೊಳಗಾಗಿ ಹಿಂದುರಿಗಿಸಲಾಗುವುದು.

**IV) ಟೆಂಡರ ಫಾರ್ಮಗಳಿಗೆ ಅರ್ಜಿ, ವಿತರಿಸುವ ಹಾಗೂ ಸ್ವೀಕರಿಸುವ ದಿನಾಂಕಗಳು**

| | | | |
|---|---|---|---|
| 1) | ಖಾಲಿ ಟೆಂಡರ ಫಾರ್ಮಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ | : | 27–10–2006 ಸಾಯಂಕಾಲ 5.30 ಗಂಟೆಯವರೆಗೆ |
| 2) | ಇ.ಎಂ.ಡಿ ಸಲ್ಲಿಸುವ ದಿನಾಂಕ: | | 30–10–2006 ಸಾಯಂಕಾಲ 5.30ರ ವರೆಗೆ |
| 3) | ಖಾಲಿ ಟೆಂಡರ ಫಾರ್ಮಗಳನ್ನು ನೀಡುವ ದಿನಾಂಕ | : | 8–11–2006 ಸಾಯಂಕಾಲ 5.30 ಗಂಟೆಯ ವರೆಗೆ |
| 4) | ಭರ್ತಿ ಮಾಡಿದ ಮೋಹರಬಂದ ಟೆಂಡರ ಫಾರ್ಮಗಳನ್ನು ಸ್ವೀಕರಿಸುವ ದಿನಾಂಕ | : | 13–11–2006 ಸಾಯಂಕಾಲ 4.00 ಗಂಟೆಯ ವರೆಗೆ |
| | ಭರ್ತಿ ಮಾಡಲಾದ ಟೆಂಡರಗಳನ್ನು ಈ ಕೆಳಕಾಣಿಸಿದ ಕಾರ್ಯಾಲಯಗಳಲ್ಲಿಯೂ ನಿಗದಿಪಡಿಸಿದ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸಬಹುದು. | : | (ಅ) ಕಾರ್ಯ ನಿರ್ವಾಹಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ |
| | | : | (ಬ) ಅಧೀಕ್ಷಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ವೃತ್ತ ಗುಲಬರ್ಗಾ |
| | | : | (ಕ) ಮುಖ್ಯ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ಸಣ್ಣ ನೀರಾವರಿ (ಉ) ವಲಯ ಬಿಜಾಪೂರ |

**V) ಲಗತ್ತಿಸುವ ಇತರೆ ಪ್ರಮಾಣ ಪತ್ರಗಳು**

(1) ಈ ಕೆಳಕಂಡ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.

(ಅ) ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣೆ ಪ್ರಮಾಣ ಪತ್ರ.

(ಬ) ಇತ್ತೀಚಿನ ಇನಕಮ್ ಟ್ಯಾಕ್ಸ ಕ್ಲಿಯರನ್ಸ ಪ್ರಮಾಣ ಪತ್ರ

(ಕ) ಇತ್ತೀಚಿನ ಸೇಲ್ಸ ಟ್ಯಾಕ್ಸ ಕ್ಲಿಯರನ್ಸ ಪ್ರಮಾಣ ಪತ್ರ.

ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ಈ ಕಛೇರಿಯಲ್ಲಿ ಟೆಂಡರ ಸ್ವೀಕರಿಸುವ ದಿನದ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು.

2) ತಾಂತ್ರಿಕ ಬಿಡ್ಡುಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯ ನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಕಛೇರಿಯಲ್ಲಿ ನಮೂದಿಸಿದ ದಿನಾಂಕದಂದು ಅಥವಾ ಸಾಧ್ಯವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು ಕಾರ್ಯ ನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಕಛೇರಿ ನೋಟಿಸ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಸೆಕ್ಷನ್–1**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್‌ಗಳನ್ನು ಈ ಕೆಳ ಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

**(1)** ವೈಯುಕ್ತಿಕ ಫರ್ಮ/ ಸಂಯುಕ್ತ/ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಪ್ರತಿಯೊಬ್ಬರು ಕೆಳಗಿನ ವಿವರ ಹೊಂದಿರಬೇಕು.

ಟೆಂಡರ ಗುತ್ತಿಗೆಗೆ ಅರ್ಹತೆ ಪಡೆಯಲು ಟೆಂಡರದಾರರು ತಮ್ಮ ಹೆಸರಿನಲ್ಲಿಯೇ ಹಿಂದಿನ 5 ವರ್ಷಗಳಲ್ಲಿ ಅಂದರೆ 2001–02 ರಿಂದ 2005–06 ನೇ ಸಾಲಿನಲ್ಲಿ ಈ ಕೆಳಗಿನಂತೆ

i) ಕನಿಷ್ಟ ಎರಡು ಆರ್ಥಿಕ ವರ್ಷದಲ್ಲಿ ರೂ. 464.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ಸಿವಿಲ ನಿರ್ಮಾಣ ಕಾಮಗಾರಿಗಳಿಗೆ ಮಾತ್ರ) ಆರ್ಥಿಕ ವಹಿವಾಟು ಮಾಡಿರಬೇಕು.

ii) ಕಳೆದ 5 ವರ್ಷಗಳಲ್ಲಿ ಮಾಡಲಾದ ಆರ್ಥಿಕ ವಹಿವಾಟುಗಳು ಮತ್ತು ಪೂರ್ಣಗೊಳಿಸಿರುವ ಕಾಮಗಾರಿಗಳ ಮೊತ್ತ ಪ್ರಸಕ್ತ ಸಾಲಿನ ದರಗಳ ಮಟ್ಟಕ್ಕೆ ಹೋಲಿಸಲು ಆಯಾ ವರ್ಷಗಳಿಗೆ ಪ್ರತಿ ವರ್ಷಕ್ಕೆ ಶೇ. 10ರಂತೆ ಮಾನ್ಯತೆ ಸೇರಿಸಲಾಗುವುದು.

iii) ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೇ ಒಂದು ಕೆರೆ ನಿರ್ಮಾಣ ಕಾಮಗಾರಿ (ಶೇಕಡಾ 90 ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಏರಿ ಕೆಲಸ, ಕಲ್ಲು ಕಟ್ಟಡ, ಸಿಮೆಂಟ, ಕಾಂಕ್ರೀಟ, ಕೆಲಸಗಳನ್ನು ವರ್ಷ 2005–06 ನೇ ಸಾಲಿನ ದರಗಳ ಮಟ್ಟಕ್ಕೆ) ರೂ. **209.00** ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪೂರ್ಣಗೊಳಿಸಿರಬೇಕು.

iv) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | |
|---|---|
| (1) ಅಗೆತದ ಕೆಲಸ | = 66,960.00 ಘ.ಮಿ. |
| (2) ಏರಿ ಕೆಲಸ | = 95,084.00 ಘ.ಮಿ |
| (3) ಕಲ್ಲು ಕಟ್ಟಡ ಕೆಲಸ | = 14,037.00 ಘ.ಮಿ. |
| (4) ಸಿಮೆಂಟ ಕಾಂಕ್ರೀಟ ಕೆಲಸ | = 1190.00 ಘ.ಮಿ. |
| (5) ಉಕ್ಕಿನ (ಸ್ಟೀಲ್) ಗೇಟುಗಳನ್ನು ರಚಿಸುವುದು ಮತ್ತು ಅಳವಡಿಸುವುದು | = 3.35 ಮೇ.ಟನ್. |
| (6) ಉಕ್ಕಿನ ( ಸ್ಟೀಲ್) | = 9.50 ಮೇ.ಟನ್. |

**2)** ಅರ್ಜಿದಾರರು ಪ್ರದರ್ಶಿಸುವುದು

(ಅ) ಮುಖ್ಯವಾಗಿ ಹಾಗು ಮಹತ್ವದಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು (ಸ್ವಂತ ಅಥವಾ ಲೀಜ)ಹೊಂದಿರಬೇಕು. ಲೀಜ ಆಗಿದ್ದಲ್ಲಿ ಜನರಲ್ ಪವರ ಆಫ್ ಅಟಾರ್ನಿ (ಉ.ಕ.ಂ.) ಮೂಲ ದಾಖಲಾತಿ ಒದಗಿಸುವುದು.

| | |
|---|---|
| (1) ಎಕ್ಸವೇಟರ/ಪೋಕ್ಲೆನ (0.90 ಘ.ಮೀ. ಸಾಮರ್ಥ್ಯ) | = 03 ನಂ |
| (2) ಲಾರಿಗಳು/ಟಿಪ್ಪರಗಳು | = 15 ನಂ |
| (3) ಕಾಂಪ್ರೆಸ್ಸರ/ವ್ಯಾಗನ್ ಡ್ರಿಲ್ಲರ | = 06 ನಂ |
| (4) ಕಾಂಕ್ರೀಟ ಮಶಿನ ಮಿಕ್ಸರ (10/7 ಘ.ಫೀಟ ಸಾಮರ್ಥ್ಯ) | = 04 ನಂ |
| (5) ವೈಬ್ರೇಟರ | = 08 ನಂ |
| (6) ಪಂಪಸೆಟ್ಟ (5 ಹೆಚ್.ಪಿ.) | = 06 ನಂ |
| (7) ಪಂಪಸೆಟ್ಟ (10 ಹೆಚ್.ಪಿ.) | = 06 ನಂ |
| (8) ಸೆಂಟ್ರಿಂಗ ಮಟೇರಿಯಲ್ಸ (ಕಾಂಕ್ರೀಟ ಕೆಲಸ) | = 50.00 ಘ.ಮೀ. ಪ್ರತಿ ದಿನಕ್ಕೆ |
| (9) 8 ರಿಂದ 10 ಟನ್ ರೋಡ ರೋಲರ್ | = 06 ನಂ. |
| (10) ನೀರಿನ ಟ್ಯಾಂಕರಗಳು | = 10 ಸಂಖ್ಯೆ |

(ಬ) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ ಕಾಮಗಾರಿಯ ಇಂತಹದೆ ನಿರ್ಮಾಣದ ಅನುಭವವುಳ್ಳ ಒಬ್ಬ ಪ್ರೋಜೆಕ್ಟ್ ಮ್ಯಾನೇಜರ ಹಾಗು ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ತಾಂತ್ರಿಕ ಪರಿಣಿತರು ಹೊಂದಿರಬೇಕು.

(ಕ) ಋಣ ವಿಮೋಚಿಸುವ ಸಾಲ ಸೌಲಭ್ಯಕ್ಕಾಗಿ ರೂ. 232.00 ಲಕ್ಷಕ್ಕೂ ಕಡಿಮೆ ಇಲ್ಲದ ಬ್ಯಾಂಕಿನಿಂದ ಸಾಲವನ್ನು ಕಾಮಗಾರಿಗೆ ಪೂರೈಸುವ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಪ್ರಮಾಣ ಪತ್ರ.

3) ಗುತ್ತಿಗೆದಾರರು ಕಾಮಗಾರಿಗೆ ಪೂರೈಸಲು ಸಾಕಷ್ಟು ಮಾನವ ಶಕ್ತಿ ಹೊಂದಿರಬೇಕು. ಹೊಂದಿರುವ ಬಗ್ಗೆ ಧೃಡಿಕರಣ ಪತ್ರ ಸಲ್ಲಿಸುವುದು.

4) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಸ್ಟೀಲ, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಕೆ ಮಾಡಿಕೊಳ್ಳಬೇಕು ಹಾಗೂ ಗುಣಮಟ್ಟವನ್ನು ಸಕ್ಷಮ ಗುಣ ನಿಯಂತ್ರಣ ಪ್ರಾಧಿಕಾರದಿಂದ ಪರೀಕ್ಷಿಸಿ ಗುಣಮಟ್ಟದ ಕುರಿತು ಪ್ರಮಾಣ ಪತ್ರ ಒದಗಿಸುವುದು.

5) ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ಫಾರ್ಮಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ಮತ್ತು ಗುತ್ತಿಗೆದಾರರು ದೃಡೀಕರಿಸಿ ಸಹಿ ಮಾಡತಕ್ಕದ್ದು. (ಝರಾಕ್ಸ ಪ್ರತಿಗಳನ್ನು ಪರಿಗಣಿಸುವುದಿಲ್ಲ).

6) ಖಾಲಿ ಟೆಂಡರ ಫಾರ್ಮಗಳನ್ನು ವಿತರಿಸುವಾಗ ಗುತ್ತಿಗೆದಾರರು ನೊಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.

7) ಅರ್ಜಿದಾರರು ವಿಶೇಷವಾಗಿ ಗಮನಿಸಬೇಕಾದ ಅಂಶಗಳು.

C) ಟೆಂಡರ ಪ್ರಕಟಣೆ ಮತ್ತು ತಾಂತ್ರಿಕ ಬಿಡ್ಡನಲ್ಲಿ ಕೇಳಲಾದ ಮಾಹಿತಿಗೆ ಅನುಗುಣವಾಗಿ ಮಾತ್ರ ಮಾಹಿತಿ ಒದಗಿಸುವುದು. ತಾಂತ್ರಿಕ ಬಿಡ್ಡ್ ಪುಸ್ತಕದ ಕ್ರಮ ಸಂಖ್ಯೆಯಿಂದ ಲಗತ್ತಿಸುವ ಮಾಹಿತಿಗಳಿಗೆ ತಪ್ಪದೆ ಪುಟ ಸಂಖ್ಯೆ ನಮೂದಿಸತಕ್ಕದ್ದು. ಅಲ್ಲದೆ ತಾಂತ್ರಿಕ ಬಿಡ್ಡ್ ಪುಸ್ತಕದಲ್ಲಿರುವ ನಮೂನೆಯಲ್ಲಿ ತಾವು ಲಗತ್ತಿಸಿದ ಮಾಹಿತಿಗಳ ಪುಟ ಸಂಖ್ಯೆ ಬರೆಯುವುದು. ಈ ರೀತಿಯ ಕ್ರಮ ತೆಗೆದುಕೊಳ್ಳದಿದ್ದರೆ ಸದರಿ ಗುತ್ತಿಗೆದಾರರ ಟೆಂಡರ ಬಿಡ್ಡ್‌ನ್ನು ಪರಿಶೀಲನೆಗೆ ಪರಿಗಣಿಸಲಾಗುವುದಿಲ್ಲ.

ಬ) ಲಕೋಟೆ – I (ತಾಂತ್ರಿಕ ಬಿಡ್ಡ್) ಮತ್ತು ಲಕೋಟಿ – II (ಆರ್ಥಿಕ ಬಿಡ್ಡ್ ) ಎಂದು ಬೇರೆ ಬೇರೆ ಎರಡು ಕವರಗಳಲ್ಲಿ ಟೆಂಡರ ಡಾಕ್ಯೂಮೆಂಟ್ಸ ಹಾಕಿ ಸೀಲ್ ಮಾಡಿ ಕವರುಗಳ ಮೇಲೆ ಕಾಮಗಾರಿಯ ಹೆಸರಿನೊಂದಿಗೆ ಸಂಪರ್ಕಿಸುವ ವಿಳಾಸ ನಮೂದಿಸುವುದು. ಪುನ: ಈ ಎರಡು ಕವರುಗಳು ಇನ್ನೊಂದು ದೊಡ್ಡ ಕವರಿನಲ್ಲಿ ಹಾಕಿ ಸೀಲ ಮಾಡಿ ಇನ್ನೊಮ್ಮೆ ಕಾಮಗಾರಿಯ ಹೆಸರಿನೊಂದಿಗೆ ಸಂಪರ್ಕಿಸುವ ವಿಳಾಸ ಬರೆಯತಕ್ಕದ್ದು.

**ಆರ್ಥಿಕ ಬಿಡ್ಡ ಸೆಕ್ಷನ್–2**

ಆರ್ಥಿಕ ಬಿಡ್ಡ ಸೆಕ್ಷನ್–2ರಲ್ಲಿ ಗುತ್ತಿಗೆದಾರರು ಐಟಂವಾರು ದರಗಳನ್ನು ಗುತ್ತಿಗೆಗೆ ಇಟ್ಟ ವಿವರಣೆಯ ಪ್ರಕಾರ ಶೆಡ್ಯೂಲ 'ಎ' ಮತ್ತು ಶೆಡ್ಯೂಲ 'ಬಿ' ಆಧಾರದ ಮೇಲೆ ನಮೂದಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆ ಮಾಡುವುದು ಅಥವಾ ತಮ್ಮದೇ ಆದ ನಿಬಂಧನೆಗಳನ್ನು ಆರ್ಥಿಕ ಬಿಡ್ಡಿನ ಸೆಕ್ಷನ್–2ರಲ್ಲಿ ಮಾಡತಕ್ಕದ್ದಲ್ಲ. ತಾಂತ್ರಿಕ ಬಿಡ್ಡ ಸೆಕ್ಷನ್–1ರಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್ಡ ಸೆಕ್ಷನ್–2 ಮಾತ್ರ ನಮೂದಿಸಿದ ದಿನಾಂಕ ರಂದು ತೆರೆಯಲಾಗುವುದು.

1) ಅಂಚೆ/ಕೋರಿಯರ್ ಮೂಲಕ ಟೆಂಡರ ಫಾರ್ಮಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.

2) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶಃ ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆ ಅಧೀನಕ್ಕೆ ಸ್ವಾಧೀನತೆಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತಃ ಸಂಧಾನದ ಮೂಲಕ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕಾಮಗಾರಿ ಪ್ರಾರಂಭಿಸಬೇಕು. ಭೂಸ್ವಾಧೀನ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೆ ಹೆಚ್ಚಿನ ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ ಎಂಬುವುದು ಗಮನಿಸತಕ್ಕದ್ದು.

3) ಟೆಂಡರುದಾರರು ಟೆಂಡರ ಶೆಡ್ಯೂಲ್ (ಬಿ) ನಲ್ಲಿ ನಮೂದಿಸಿರುವ ಇಲಾಖಾ ದರಗಳಿಗಿಂತ ಕಡಿಮೆ ದರಗಳನ್ನು ನಮೂದಿಸಿದ್ದಲ್ಲಿ ಟೆಂಡರಿನ ಒಟ್ಟು ವ್ಯತ್ಯಾಸದ ಮೊತ್ತಕ್ಕೆ ಪೂರಕವಾಗಿ ಇ.ಎಂ.ಡಿ.ಯನ್ನು ಡಿ.ಡಿ. ಅಥವಾ ಬ್ಯಾಂಕರ ಚೆಕ್ ರೂಪದಲ್ಲಿ ಟೆಂಡರ ಸಲ್ಲಿಸುವ ದಿನಾಂಕದಂದು ಪ್ರತ್ಯೇಕವಾಗಿ ಆರ್ಥಿಕ ಬಿಡ್ಡ್ ಭಾಗ–II ರೊಂದಿಗೆ ಲಗತ್ತಿಸಿರಬೇಕು. ಲಗತ್ತಿಸದಿದ್ದಲ್ಲಿ ಅಂಥಹ ಟೆಂಡರಗಳನ್ನು ತಿರಸ್ಕರಿಸಲಾಗುವುದು.

4) ಟೆಂಡರ ಡಾಕ್ಯೂಮೆಂಟಿನ ಸೆಕ್ಸನ – 2 ರಲ್ಲಿ (ಆರ್ಥಿಕ ಬಿಡ್ಡ್) ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳು ತಿರಸ್ಕರಿಸಲಾಗುವುದು.

5) ಟೆಂಡರ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ ಅಥವಾ ಎಲ್ಲಾ ಟೆಂಡರಗಳನ್ನು ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

6) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯ ನಿರ್ವಾಹಕ ಅಭಿಯಂತರು ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ ಇವರ ಕಛೇರಿಯ ನೋಟಿಸ ಫಲಕದಲ್ಲಿ ಪ್ರಕಟಿಸಲಾಗುವುದು/ತಿಳಿಸಲಾಗುವುದು.

7) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕವೆಂದು ಪರಿಗಣಿಸುವುದು.

8) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಪ್ರಕಾಶ ಶ್ರೀಹರಿ ಬಿ.**
ಕಾರ್ಯ ನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಗುಲಬರ್ಗಾ

ಪಿ.ಆರ್. 531

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ) ಕೋಲಾರ

**ಸಪೋಟ ಫಸಲಿನ ವಿಲೇವಾರಿಗೆ ಟೆಂಡರ್ / ಟೆಂಡರ್.ಕಂ.ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಹಿಸತೋನಿ : ರಾವ : ಕೋ : ಸತೋಅ1 / 40 / 2006-07, ದಿನಾಂಕ: 25ನೇ ಆಗಸ್ಟ್ 2006.**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಆಸಕ್ತ ಹಣ್ಣು ವ್ಯಾಪಾರಸ್ಥರಿಗೆ ತಿಳಿಯಪಡಿಸುವುದೇನೆಂದರೆ, ಈ ಕಛೇರಿ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ / ಸಸ್ಯಾಗಾರಗಳ 2006ನೇ ಸಾಲಿನ ದಿನಾಂಕ: 1.7.2006 ರಿಂದ 31.12.2006 ರ ವರೆಗಿನ ಸಪೋಟ ಫಸಲಿನ ವಿಲೇವಾರಿಯನ್ನು ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್ / ಟೆಂಡರ್-ಕಂ-ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆಯನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ಕ್ರ. ಸಂ. | ಕ್ಷೇತ್ರದ ಹೆಸರು | ಹರಾಜು ನಡೆಸುವ ವಿಧಾನ | ಫಸಲಿನ ಹೆಸರು | ಮರಗಳ ಸಂಖ್ಯೆ | ಮುಂಗಡ ಠೇವಣಿ ಮೊತ್ತ (ರೂ.ಗಳಲ್ಲಿ) | ಟೆಂಡರ್ / ಟೆಂಡರ್-ಕಂ-ಬಹಿರಂಗ ಹರಾಜು ನಡೆಸುವ ದಿನಾಂಕ ಮತ್ತು ಸಮಯ |
|---|---|---|---|---|---|---|
| 1 | ಪಿ.ಆರ್.ಎಸ್. ಕ್ಷೇತ್ರ ಚಿಕ್ಕಬಳ್ಳಾಪುರ ತಾಲ್ಲೂಕು | ಟೆಂಡರ್ ಮಾತ್ರ | ಸಪೋಟ | 900 | 10,000.00 | ದಿನಾಂಕ: 26.9.2006 ಸಮಯ : 3.00 ಗಂಟೆ ಸ್ಥಳ:ಹಿಸತೋನಿ(ರಾವ) ಕೋಲಾರ |
| 3 | ಹೊಗಳಗೆರೆ ಕ್ಷೇತ್ರ ಶ್ರೀನಿವಾಸಪುರ ತಾಲ್ಲೂಕು | ಟೆಂಡರ್ ಮಾತ್ರ | ಸಪೋಟ | 2335 | 10,000.00 | ದಿನಾಂಕ: 30.9.2006 ಸಮಯ : 3.00 ಗಂಟೆ ಸ್ಥಳ:ಹಿಸಶಿತೋನಿ(ರಾವ) ಕೋಲಾರ |
| 5 | ಜಿಲ್ಲಾ ನರ್ಸರಿ, ಕೋಲಾರ | ಟೆಂಡರ್-ಕಂ-ಬಹಿರಂಗ ಹರಾಜು | ಸಪೋಟ | 13 | 500.00 | ದಿನಾಂಕ: 7.10.2006 ಸಮಯ : 12.30 ಗಂಟೆ ಸ್ಥಳ: ಜಿಲ್ಲಾ ಸಸ್ಯಾಗಾರ, ಕೋಲಾರ |
| 6 | ಶಿಡ್ಲಘಟ್ಟ ಸಸ್ಯಾಗಾರ, ಶಿಡ್ಲಘಟ್ಟ ತಾಲ್ಲೂಕು | ಟೆಂಡರ್-ಕಂ-ಬಹಿರಂಗ ಹರಾಜು | ಸಪೋಟ | 68 | 1,000.00 | ದಿನಾಂಕ: 9.10.2006 ಸಮಯ : 12.30 ಗಂಟೆ ಸ್ಥಳ : ಶಿಡ್ಲಘಟ್ಟ ಸಸ್ಯಾಗಾರ ಶಿಡ್ಲಘಟ್ಟ |
| 7 | ಪಸಪಲೋಡು ಕ್ಷೇತ್ರ ಗುಡಿಬಂಡೆ ತಾಲ್ಲೂಕು | ಟೆಂಡರ್-ಕಂ-ಬಹಿರಂಗ ಹರಾಜು | ಸಪೋಟ | 50 | 500.00 | ದಿನಾಂಕ: 13.10.2006 ಸಮಯ : 12.30 ಗಂಟೆ ಸ್ಥಳ: ಪಸಪಲೋಡು ಕ್ಷೇತ್ರ ಗುಡಿಬಂಡೆ ತಾಲ್ಲೂಕು |
| 8 | ದೊಡ್ಡಶಿವಾರ ಕ್ಷೇತ್ರ ಮಾಲೂರು ತಾಲ್ಲೂಕು | ಟೆಂಡರ್-ಕಂ-ಬಹಿರಂಗ ಹರಾಜು | ಸಪೋಟ | 295 | 1,000.00 | ದಿನಾಂಕ: 17.10.2006 ಸಮಯ : 12.30 ಗಂಟೆ ಸ್ಥಳ: ದೊಡ್ಡಶಿವಾರ ಕ್ಷೇತ್ರ ಮಾಲೂರು ತಾಲ್ಲೂಕು |

**ಟೆಂಡರ್ ಸಲ್ಲಿಸುವವರು ಟೆಂಡರನ್ನು ನಡೆಸುವ ದಿನಾಂಕದಂದು ಮಧ್ಯಾಹ್ನ 3.00 ಸಮಯದೊಳಗಾಗಿ ಅಥವಾ ಮತ್ತು ಮುಂಚಿತವಾಗಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಕೋಲಾರ ರವರ ಕಛೇರಿಯಲ್ಲಿ ಸಲ್ಲಿಸಬೇಕು.**

ಈ ಬಗ್ಗೆ ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರ, ನಿಬಂಧನೆ, ಷರತ್ತುಗಳನ್ನು ಈ ಕೆಳಸಹಿದಾರರ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳ ಅಧಿಕಾರಿಗಳಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
ಪಿ.ಆರ್. 534 (ರಾಜ್ಯವಲಯ), ಕೋಲಾರ.

## ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ

**ಫಾರಂ 1**

**(9ನೇ ನಿಯಮ ನೋಡಿ)**

**ಅಧಿಸೂಚನೆ**

ಶ್ರೀ ಕೆ.ಜಿ. ಗೋವಿಂದಪ್ಪ, ಪಿಎಸ್ಐ ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಎಂದು ಕರ್ತವ್ಯ ನಿರ್ವಹಿಸಿದ್ದು, ಅವರ ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಈ ಹೆಸರಿಗೆ - ಕೆ.ಜಿ. ಗೋವಿಂದರಾಜ

ಪಿ.ಡಿ. 173 ಆರಕ್ಷಕ ಅಧೀಕ್ಷಕರು, ಗದಗ ಜಿಲ್ಲೆ, ಗದಗ.

## ಜಿಲ್ಲಾ ಪೊಲೀಸ್ ಕಾರ್ಯಾಲಯ, ಗದಗ ಜಿಲ್ಲೆ, ಗದಗ

**ಫಾರಂ 1**

**(9ನೇ ನಿಯಮ ನೋಡಿ)**

**ಅಧಿಸೂಚನೆ**

ಶ್ರೀ ಮರಿಯಪ್ಪ ತಂದೆ ಶಂಕರ ಜೋಗದಂಡಿ, ಸಿಪಿಸಿ-768 ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಕಾನ್ಸಟೇಬಲ್ ಎಂದು ಕರ್ತವ್ಯ ನಿರ್ವಹಿಸುತ್ತಿದ್ದು, ಅವರ ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಈ ಹೆಸರಿಗೆ - ಮಾರುತಿ ತಂದೆ ಶಂಕರ ಜೋಗದಂಡಕರ್

ಪಿ.ಡಿ. 174 ಆರಕ್ಷಕ ಅಧೀಕ್ಷಕರು, ಗದಗ ಜಿಲ್ಲೆ, ಗದಗ.